7 ಸಾರಧರಿತಂ ಪ್ರಮೋದಾನಸ್ಮಾಕಂದಿಶತು ಭವತಾಮಪ್ಯವಿಕಲಂ ॥
8 ಹರೇರ್ಲೀಲಾವರಾಹಸ್ಯದಂಷ್ಟ್ರಾದಂಡಸ್ಸಪಾತುನಃ ಹೇಮಾದ್ರಿಕಲ
9 ಶಾಯತ್ರ ಧಾತ್ರೀ ಛತ್ರಶ್ರಿಯಂದಧೌ ನಮಸ್ತೇಸ್ತುವರಾಹಾಯ ಲೀ
10 ಲಯೋದ್ಧರತೇಮಹೀಂ। ಖುರಮಧ್ಯಗತೋಯಸ್ಯ ಮೇರುಃಕಣ
11 ಕಣಾಯತೇ। ಪಾತುತ್ರೀಣಿ ಜಗಂತಿ ಸಂತತಮಕೂಪಾರಾದ್ಧರಾ
12 ಮುದ್ಧರನ್ಕ್ರೀಡಾ ಕ್ರೋಡಕಳೇಬರಸ್ಸಭಗವಾನ್ಯಸ್ಯೈಕದಂಷ್ಟ್ರಾಂಕು
13 ರೆ ಕೂರ್ಮಃ ಕಂದತಿ ನಾಳತಿದ್ವಿರಸನಃ ಪತ್ರಂತಿದಿಗ್ದಂತಿನೋ ಮೇ
14 ರುಃ ಕೋಶತಿ ಮೇದಿನೀಜಲಜತಿವ್ಯೋಮಾಪಿರೋಲಂಬತಿ ಸ್ವಸ್ತಿಶ್ರೀ
15 ವಿಜಯಾಭ್ಯುದಯ ಶಾಲೀವಾಹನಶಕ ವರ್ಷಂಗಳು ೧೭೪೮ನೆ ಸಂದ
16 ವರ್ತಮಾನ ವ್ಯಯನಾಮ ಸಂವತ್ಸರದ ಆಷಾಢ ಶು ೧೦ ಶುಕ್ರವಾ
17 ರದಲ್ಲು ಅತ್ರೇಯಸಗೋತ್ರ ಆಶ್ವಲಾಯನ ಸೂತ್ರ ಋಕ್ಶಾಖಾನು
18 ವರ್ತಿಗಳಾದ ಕೃಷ್ಣರಾಜ ವಡೆಯರವರ ಪೌತ್ರರಾದ ಯಿಂಮಡಿ
19 ಕೃಷ್ಣರಾಜ ವಡೆಯರವರ ಪುತ್ರರಾದ ಚಾಮರಾಜ ವಡೆಯ
20 ರವರ ಧರ್ಮಪತ್ನಿ ದೇವಾಜಂಮಂಣ್ಣಿಯವರು ಮೌನಭಾರ್ಗ
21 ವ ಗೋತ್ರದ ಆಶ್ವಲಾಯನಸೂತ್ರ ಋಕ್ಶಾಖಾಧ್ಯಾಯಿಗಳಾ
22 ದ ಪ್ರಧಾನ ವೆಂಕಪ್ಪೈನವರ ಪೌತ್ರರಾದ ರಾಮದಾಸೈನವರ
23 ಪುತ್ರರಾದ ವೆಂಕಟರಾಮೈನವರಿಗೆ ಬರೆಶಿಕೊಟ್ಟ ಸೋಪಸ್ಕರೋ
24 ಪಕರಣ ಗೃಹಸಹಿತವಾದ ಭೂದಾನಸಾಧನ ವೆಂತೆಂದರೆ
25 ದಕ್ಷಿಣಾಯನ ಪುಣ್ಯಕಾಲವಾದ ಈದಿವ್ಸದಲ್ಲಿ ನಾವು ತುಲಾ
26 ಭಾರದಾನವಂ ಮಾಡುವಲ್ಲಿ ಚಿರಂಜೀವಿ ಸಹಸ್ರಾಯುಷ್ಯರಾದ
27 ನಮ್ಮ ಅಯ್ಯಾಜಿಯವರ ಪ್ರೇರಣೆಯಿಂದ ಭೂದಾನವಂ ಮಾ
28 ಡಿ ಅಗ್ರಹಾರವಂ ಮಾಡಿಸಿದ್ದಕ್ಕೆ ವ್ಯೂಹ ಪಂಚಕಕ್ಕೆ ಗಣಸಂ
29 ಖ್ಯಾವೃತ್ತಿ ದೇವರವೃತ್ತಿ ಪಂದುಸಹ ಅರವತ್ತು ವೃತ್ತಿಗೆ ಯೀವೃತ್ತಿವಂ
30 ತರಿಗೆ ನರಸೀಪುರತಾಲ್ಲುಕು ಹೇಮಾವತೀ ನದೀತೀರದಲ್ಲಿ ಹೇಮಗಿ
31 ರಿ ಸಮೀಪದ ಬಂಡಿಹೊಳೆ ಗ್ರಾಮದಬಳಿ ಮನೆಗಳಕಟ್ಟಿಶಿ ದೇವಾ
32 ಂಬಾ ಅಗ್ರಹಾರವೆಂಬ ಹೆಸರಿಟ್ಟು ಈವೃತ್ತಿಗಳಿಗೆ ಸಲ್ಲುವ ನ
33 ರಶೀಪುರ ತಾಲ್ಲುಕು ಬಂಡಿಹೊಳೆ ಹೋಬಳಿ ಪೈಕಿ ಕಸಬಾಬಂಡಿಹೊಳೆ
34 ಗ್ರಾಮ ತೆರಣೇನಹಳ್ಳಿ ಮಡವನಕೋಡಿ ಹೋಬಳಿ ಪೈಕಿ ಕಸಬಾ ಮ
35 ಡವನಕೋಡಿಗ್ರಾಮ ಯಾಡಮಾನಹಳ್ಳಿ ಯಾಚೇನಹಳ್ಳಿ ತೆಡಗರಹ
36 ಳ್ಳಿ ಹರಿಹರಪುರದ ಹೋಬಳಿ ಪೈಕಿ ಮೆಳ್ಳಹಳ್ಳಿ ಕುರಣೇನಹ
37 ಳ್ಳಿ ಅಕ್ಕಿಹೆಬ್ಬಾಳು ಹೋಬಳಿ ಪೈಕಿ ಆಲಂಬಾಡಿಗ್ರಾಮ ಬಸವನ ಹ
38 ಳ್ಳಿ ಮಾಂಬಳಿ ದಡದಹಳ್ಳಿ ವೆಂಚವಳಲುಗ್ರಾಮ ಉಭಯಂಹದಿ
39 ರುಗ್ರಾಮ-ಕೆರೆ-ಕಟ್ಟೆ-ಕಾಲ್ವೆಗಳ ಸಹ ಸರ್ವಮಾನ್ಯವಾಗಿ ನಡಸು
40 ವಂತೆ ಆ ತಾಲ್ಲುಕು ಆಮೀಲಗೆ ಚಿರಂಜೀವಿ ಸಹಸ್ರಾಯುಷ್ಯರಾದ ಅ
41 ಯ್ಯಾಜಿಯವರು ಸನ್ನದು ಬರೆಶಿಕೊಟ್ಟು ಇರುವುದರಿಂದ ಆ ಸ
42 ನ್ನದುಮೇರೆ ಅರುವತ್ತು ವೃತ್ತಿ ಪೈಕಿ ಒಂದು ವೃತ್ತಿಯನ್ನು ಸೋಪಸ್ಕ
43 ರೋಪಕರಣಶಹಿತವಾಧ ಮನೆಸಹ ನಿಮ್ಮ ದಂಪತಿಗಳ
44 ಅಲಂಕರಿಸಿ ಶಾಶ್ವತ ಪುಣ್ಯಲೋಕವಾಸ ಸಿದ್ಧ್ಯರ್ಥವಾಗಿ ಸ
45 ಹಿರಣ್ಯೋದಕದಾನ ಧಾರಾಪೂರ್ವಕವಾಗಿ ಮೌನಭಾರ್ಗ
46 ವಗೋತ್ರ ಆಶ್ವಲಾಯನಸೂತ್ರ ಋಕ್ಶಾಖಾಧ್ಯಾಯಿಗಳಾದ
47 ಪ್ರಧಾನ ವೆಂಕಪ್ಪೈನವರ ಪೌತ್ರರಾದ ರಾಮದಾಸೈನವರ ಪು
48 ತ್ರರಾದ ವೆಂಕಟರಾಮೈನವರಿಗೆ ಆತ್ರೇಯಸಗೋತ್ರ ಆಶ್ವಲಾ
49 ಯನಸೂತ್ರ ಋಕ್ಶಾಖಾನುವರ್ತಿಗಳಾದ ಕೃಷ್ಣರಾಜವಡೆಯ
50 ರವರ ಪೌತ್ರರಾದ ಯಿಮ್ಮಡಿ ಕೃಷ್ಣರಾಜ ವಡೆಯರವರ ಪು
51 ತ್ರರಾದ ಚಾಮರಾಜ ವಡೆಯರವರ ಧರ್ಮಪತ್ನಿ ದೇವರಾಜ
52 ಂಮಣ್ಣಿಯವರು ಧಾರೆಯನ್ನೆರದುಕೊಟ್ಟವಾದಕಾರಣ ಯೀ
53 ವೃತ್ತಿಗೆ ಸಲುವ ಗದ್ದೆ-ಬದ್ದಲು ತೋಟ-ತುಡಿಕೆ ಕಾಡಾರಂಬ ನೀ
54 ರಾರಂಬ ಮಗ್ಗ ಮನೆ ಹಣ ಕೆಂಪುನೂಲು ಉಪ್ಪಿನಮೋಳೆ ಈ
55 ಚಲುಪೈರು ಪುರವರ್ಗ ಯೇರುಕಾಣಿಕ ನಾಮಕಾಣಿಕೆ ಗುರು
56 ಕಾಣಿಕೆ ಕಾಣಿಕೆ ಬೇಡಿಕೆ ಕಬ್ಬಿಣದ ಪೊಂಮು ಅಲೆಪೊಮ್ಮು
57 ಹತ್ತಿಪೊಮ್ಮು ಮಾರ್ಗ ಕರಗ ಪಡಿಸುಂಕ ಪೊಂಮು ಜಾತಿಕೂ
58 ಟ ಸಮಯಾಚಾರ ಹುಲ್ಲು ಹಣ ಚರಾದಾಯ ಹೊರಾದಾಯ
59 ಶೀಗೆ ಮಡ್ಡಿ ಪತಂಗ ಪೊಪ್ಪಳಿ ಗಿಡಗಾವಲು ಬ್ರಾಹ್ಮಣನಿವೇಶನ

60 ಶೂದ್ರನಿವೇಶನ ಸೊಪ್ಪಿನತೋಟ ತಿಪ್ಪೆಹಳ್ಳ ಶ್ರೀಗಂಧ ಹೊರತಾ
61 ದ ಮರವಳಿ ಫಲವೃಕ್ಷ ಮಧ್ವಿಕ ಮುಂತಾದ ಈವಂದು ವೃ
62 ತ್ತಿಗೆ ಸಲುವ ಆಸಕಲ ಸ್ವಾಮ್ಯವನ್ನು ಧೃವುಂಡಿಗೆ ಮೇರೆ ರೋ
63 ಹಿಸಿಕ್ಕೊಂಡು ಈ ವ್ಯಯ ಸಂವತ್ಸರದಾರಭ್ಯ ನಿರುಪಾಧಿ
64 ಕ ಸರ್ವಮಾನ್ಯವಾಗಿ ನೀವು ನಿಮ್ಮ ಪುತ್ರ ಪೌತ್ರ ಪಾರಂಪರ್ಯವಾಗಿ
65 ಆಚಂದ್ರಾರ್ಕಸ್ಥಾಯಿಗಳಾಗಿ ಅನುಭವಿಸುತ್ತಾ ಚಿರಂಜೀ
66 ವಿ ಸಹಸ್ರಾಯುಷ್ಯರಾದ ನಮ್ಮ ಅಯ್ಯಾಜಿಯವರ ಶ್ರೇಯಃಪ್ರಾ
67 ರ್ಥನೆಮಾಡುತ್ತಾ ಸುಖದಿಂದ ಇರುವುದು ಈ ವೃತ್ತಿಗೆ ಶೇರಿ
68 ದ ಭೂಮಿವಳಗಣ ನಿಧಿನಿಕ್ಷೇಪ ಜಲತರು ಪಾಷಾಣ ಅಕ್ಷೀಣಾ
69 ಗಾಮಿ ಸಿದ್ಧಸಾಧ್ಯಗಳೆಂಬ ಅಷ್ಟಭೋಗ ತೇಜ ಸ್ವಾಮ್ಯಗಳು ನಿ
70 ಮಗೆ ಸಲುವದು ಯಿಲ್ಲಿಂದ ಮುಂದೆ ಯೀವೃತ್ತಿಯು ನೀವು ಮಾ
71 ಡುವ ಅಧಿಕ್ರಯ ದಾನ ಪರಿವರ್ತನೆಗಳೆಂಬ ವ್ಯವಹಾರ ಚತು
72 ಷ್ಟಯಗಳಿಗೂ ನಿಮಗೆ ಯೋಗ್ಯವಾಗಿ ಸಲುವುದೆಂದು ಆತ್ರೇಯ
73 ಸಗೋತ್ರ ಆಶ್ವಲಾಯನಸೂತ್ರ ಋಕ್ಶಾಖಾನುವರ್ತಿಗಳಾ
74 ದ ಕೃಷ್ಣರಾಜ ವಡೆಯರವರ ಪೌತ್ರರಾದ ಇಮ್ಮಡಿ ಕೃಷ್ಣರಾಜ
75 ವಡೆಯರವರ ಪುತ್ರರಾದ ಚಾಮರಾಜ ವಡೆಯರವರ ಧ
76 ರ್ಮಪತ್ನಿ ದೇವಾಜಂಮಣ್ಣಿಯವರು ಮೌನಭಾರ್ಗವಗೋ
77 ತ್ರ ಆಶ್ವಲಾಯನಸೂತ್ರ, ಯಜುಶ್ಶಾಖಾಧ್ಯಾಯಿಗಳಾದ ಪ್ರ
78 ಧಾನ ವೆಂಕಪ್ಪಯ್ಯನವರ ಪೌತ್ರರಾದ ರಾಮದಾಸ್ಯನವರ ಪು
79 ತ್ರರಾದ ವೆಂಕಟರಾಮಯ್ಯನವರಿಗೆ ಬರೆಸಿಕೊಟ್ಟ ಸೋಪಸ್ಕ
80 ರೋಪಕರಣ ಗೃಹಸಹಿತವಾದ ಭೂದಾನಸಾಧನಸಹೀ
81 ಆದಿತ್ಯ ಚಂದ್ರಾವನಿಲೋನಲಶ್ಚ ದ್ಯಾರ್ಭೂಮಿರಾಪೋಹೃದ
82 ಯಂ ಯಮಶ್ಚ। ಅಹಶ್ಚರಾತ್ರಿಶ್ಚಉಭೇಚ ಸಂಧ್ಯೇ ಧರ್ಮ
83 ಶ್ಚ ಜಾನಾತಿ ನರಸ್ಯ ವೃತ್ತಂ॥ ಸ್ವದತ್ತಾದ್ವಿಗುಣಂಪುಣ್ಯಂಪರ
84 ದತ್ತಾನುಪಾಲನಂ। ಪರದತ್ತಾಪಹಾರೇಣಸ್ವದತ್ತಂ ನಿಷ್ಫಲಂ
85 ಭವೇತ್॥ ಸ್ವದತ್ತಾ ಪುತ್ರಿಕಾಧಾತ್ರೀ ಪಿತೃದತ್ತಾ ಸಹೋದರೀ
86 ಅನ್ಯದತ್ತಾತುಮಾತಾಸ್ಯಾದ್ದತ್ತಾಂಭೂಮಿಂ ಪರಿತ್ಯಜೇತ್ ಸ್ವ
87 ದತ್ತಾಂ ಪರದತ್ತಾಂವಾ ಯೋಹರೇತ ವಸುಂಧರಾಂ ಷಷ್ಠಿರ್ವ
88 ರ್ಷಸಹಸ್ರಾಣಿ ವಿಷ್ಟಾಯಾಂಜಾಯತೇಕ್ರಿಮಿಃ ಮದ್ವಂ
89 ಶಜಾಃ ಪರಮಹೀಪತಿ ವಂಶಜಾವಾ ಯೇಭೂಮಿಪಾ ಸ್ಸತ
90 ತ ಮುಜ್ವಲ ಧರ್ಮಚಿತ್ತಾಃ॥ ಮದ್ಧರ್ಮಮೇವ ಸತತಂಪರಿ
91 ಪಾಲಯಂತಿ ತತ್ಪಾದ ಪದ್ಮಯುಗಳಂ ಶಿರಸಾನಮಾಮಿ
92 ಬ॥ ತಾರೀಖು ೧೪ನೇ ಮಾಹೆ ಜುಲಯಿ ಸರ್ ೧೮೩೭ನೆ ಯಿಸ
93 ವಿಯಲ್ಲು ಶ್ರೀಕಂಠ

## 114

ಕಿಕ್ಕೇರಿ ಹೋಬಳಿ ಕಡಂಬಿಗೆಯ ವಿಭೂತಿಯ ಕುಪ್ಪೆಯಲ್ಲಿ ಬಿದ್ದಿರುವ ಕಲ್ಲು.

ಪ್ರಮಾಣ 2′–4″×0′–9″

1 ಹೆಮ್ಮೊಗೆಯ
2 ಚಿಕಗವ್ವಣ್ಣ
3 ನಂಕಕಟಿದೇವ
4 ಗ್ಗೆ ಬಿಟ್ಟಗದ್ದೆ
5 ಸಲಗೆಮೂಱು
6 ಬೆದ್ದಲೆಗೆ ಒ
7 ನ್ದುಸಲಗೆ
8 (ಗೆ) ಇನಿಸು
9 ವಂ ಅಳಿದನ್ದು
10 ಕವಿಲೆಯ
11 ಕೊಂದಪಾ (?)

## 115

ಅಕ್ಕಿಹೆಬ್ಬಾಳು ಹೋಬಳಿ ಶ್ರವಣನ ಹಳ್ಳಿಗೆ ಪೂರ್ವದಲ್ಲಿ ಬಿದ್ದಿರುವ ಕಲ್ಲು.

ಪ್ರಮಾಣ 4′×2′

1 ಶ್ರೀಮತ್ಪರಮಗಂಭೀರಸ್ಯಾದ್ವಾದಾಮೋಘಲಾಂಛ
2 ನಂಜೀಯಾತ್ರೈಲೋಕ್ಯನಾಥಸ್ಯ ಶಾಸನಂಜಿನಶಾಸನಂಸ್ವಸ್ತಿ
3 ಶ್ರೀಮನ್ಮಹಾಮಂಡಳೇಶ್ವರತ್ರಿಭುವನಮಲ್ಲತಳ
4 ಕಾಡುಗೊಣ್ಡಭುಜಬಳ ವೀರಗಂಗ ವಿಷ್ಣುವರ್ದ್ಧನ ಹೊಯ್ಸ
5 ಳ ದೇವರ ಪಿರಿಯರಸಿ ಚಂದಲ ದೇವಿಯರು॥ ತ್ರಿಭುವನತಿಳ

6 ····ಶ್ರೀರ್ಥ್ವದ ವೀರಕೊಂಗಾಳ್ವಜಿನಾಲಯ
7 ದ ದೇವರ ಅಂಗಭೋಗಕ್ಕಂ ರಿಷಿಯರಾಹಾರದಾನಕ್ಕಂತ
8 ಮ್ಮಬಪ್ಪಪ್ರಿಥ್ವಿಯ ಕೊಂಗಾಳ್ವ ದೇವರವಗಬಳಿವಳಿಬಿ
9 ಟ್ಟ ಮಂಡಗೆದೆಯ ಶ್ರಿತಿಯೊಳಗೆ ಕಾವನಹಳ್ಳಿಯತಮ್ಮ
10 ತಮ್ಮ ದುದ್ದಮಲ್ಲದೇವನು ತಾವು ಬಿಬ್ದಿ ಶ್ರೀ ಮೂಲಸಂಘ
11 ದೇಸಿಗ ಗಣಪುಸ್ತಕಗಚ್ಚಕೊಣ್ಡಕುಂದಾನ್ವಯದ ಶ್ರೀಮೇಘ
12 ಚಂದ್ರತ್ರೈವಿದ್ಯದೇವರ ಶಿಷ್ಯರು ಪ್ರಭಾಚಂದ್ರಸಿದ್ಧಾ [ನ್ತದೇವ]
13 ರ ಕಾಲಂಕಚ್ಚಿಧಾರಾಪೂರ್ವ್ವಕಂಮಾಡಿ [ಸರ್ವ್ವಬಾಧಾ]
14 ಪರಿಹಾರಂಮಾಡಿಬಿಟ್ಟದತ್ತಿಮಂ[ಗಲಮಹಾ]
15 ಶ್ರೀ॥ ಇದನಾವನೊರ್ವ್ವಂ ಪ್ರತಿಪಾಳಿಸಿದ
16 ವಿಲೆಯಕೋಡುಂಕೊಳಗಮುಂ
17 ಗಂಗೆಯ········

## 116

### ಚನಕುರಳಿ ಹೋಬಳಿ ಮಯಿಲನಹಳ್ಳಿಯ ಊರಮುಂದೆ ನಟ್ಟಕಲ್ಲು.

1 ಶುಭಮಸ್ತು ಶಾಲಿವಾಹನ ಶಕವರಿಷ············
2 ೫೭ ಸಂದವರ್ತಮಾನವಾದ ಜಯ·············
3 ತ್ಸರದ ವಯಿಶಾಖ ಬ ೧೨ ಲೂ···············
4 ರಾಯರಿಗೆ ಬಿನ್ನಾಹಮಾಡಿ ರಾಯರ
5 ಪ್ಪಣೆಯಲೂ ರಾಮಾಭಟರು (?)·············
6 ವೊಳಗಾಗಿ ಯಿದಪುರ ತಾಂಜಂ ವೃನ್ದಾವನ
7 ದ ವೊಳಗಾದ ಮಯಿಲನ ಹಳ್ಳಿ ಆ ಪುರದ
8 ಗ್ರಾಮುಗಳನು ಅಬ್ಬಗಂಜೂರು ನಂಜರಾ
9 ಜಗಳೂ ತಮ್ಮ ಧರ್ಮವಾಗಿ ವೇಲುಗೋ
10 ಟೆಯ ಚಲಪಿಳರಾಯರಿಗರ್ಪಿಸಿದ
11 ರು ನಾಳಿಗಾಚಾರಿ ಸಿಂದಗ್ರಾಮದ ಚಲುವ
12 ರಾಮಾನುಜನ ಬರಹ

## 117

### ಅದೇ ಹೋಬಳಿ ವಸಂತಪುರದ ಆಂಜನೇಯನ ಗುಡಿಯ ಮುಂದಣ ಗರುಡಗಂಬದಲ್ಲಿ

ಪ್ರಮಾಣ 1′–2″×1′–6″
ಹೊಸಕನ್ನಡದ ಅಕ್ಷರ

1 ಶ್ರೀ ವಸಂತಪುರದ ಬ | 2 ಸವೇ ಗೌಡನಮಗ ಕೆ | 3 ಂಪ್ಪೇಗೌಡನು ಶ್ರೀ ರಾಮು

---

## 118

### ಮಂಡ್ಯದ ತಾಲ್ಲೋಕು.

ದುದ್ದದ ಹೋಬಳಿ ಹುಳ್ಳೇನಹಳ್ಳಿ ಚಾಮಯ್ಯನ ವಶದಲ್ಲಿದ್ದ ತಾಂಮ್ರಶಾಸನ 5 ಹಲಗೆ ಉಂಗರ, ಆನೆ ಮೊಹರಿದೆ.

I b 1 ಸ್ವಸ್ತಿಜಿತಂಭಗವತಾಗತಘನಗಗನಾಭೇನಪತ್ಮನಾಭೇನ ಶ್ರೀಮತ್ಜಾಹ್ನವೇಯಕುಲಾವುಲವ್ಯೋಮಾವಭಾ
2 ಸನಧಾಸ್ಕರಃಸ್ವಬಡ್ಗೈಕಪ್ರಹಾರಖಣ್ಡಿತಮಹಾಶಿಲಾಸ್ತಮ್ಭಲಬ್ದ ಬಲಪರಾಕ್ರಮೋದಾರುಣಾರಿಗಣ
3 ವಿದಾರುಣೋಪಲಬ್ದವ್ರಣವಿಭೂಷಣ ವಿಭೂಷಿತಃ ಕಾಣ್ವಾಯನಸಗೋತ್ರಃ ಶ್ರೀಮತ್ ಕೊಂಗುಣಿ ವರ್ಮ್ಮಧ
4 ರ್ಮ್ಮ ಮಹಾಧಿರಾಜಃ ತಸ್ಯಪುತ್ರಃ ಪಿತುರನ್ವಾಗಕಗುಣಯುಕ್ತೋ ವಿದ್ಯಾವಿನಯವಿಹಿತವೃತ್ತಸಮ್ಯಕ್ಪ್ರಜಾ
5 ಪಾಲನಮಾತ್ರಾಧಿಗತರಾಜ್ಯ ಪ್ರಯೋಜನೋ ವಿದ್ವತ್ಕವಿ ಕಾಞ್ಚನನಿಕ ಷೋಪಲಭೂತೋ ನೀತಿಶಾಸ್ತ್ರಸ್ಯವಕ್ತೃಪ್ರ
6 ಯೋಕ್ತೃ ಕುಶಲೋದತ್ತಕ ಸೂತ್ರವೃತ್ತೆ ಪ್ರಣೇತಾ ಶ್ರೀಮಾನ್ಮಾಧವ ಮಹಾಧಿರಾಜಃ ತತ್ಪುತ್ರಃಪಿತೃ
7 ಪೈತಾಮಹಗುಣ ಯುಕ್ತೋನೇಕಚಾತುರ್ದನ್ತಯುದ್ಧವಾಪ್ತ ಚತುರುದಧಿಸಲಿಲಾಸ್ವಾದಿತ
II a 8 ಯಶಾಃ ಶ್ರೀಮತ್ ಹರಿವರ್ಮ್ಮಮಹಾಧಿರಾಜಃ ತತ್ಪುತ್ರಃ ದ್ವಿಜಗುರುದೇವತಾ ಪೂಜನ ಪರೋನಾರಾಯಣ
9 ಚರಣಾನುಧ್ಯಾತ ಶ್ರೀಮತ್ ವಿಷ್ಣುಗೋಪಮಹಾಧಿರಾಜಃ ತತ್ಪುತ್ರಃ ತ್ರ್ಯಮ್ಬಕಚರಣಾಮ್ಭೋರುಹ ರಜ
10 ಪ್ಪವಿತ್ರೀ ಕೃತೋತ್ತಮಾಂಗಃ ಸ್ವಭುಜಬಲಪರಾಕ್ರಮಕ್ರಯಕ್ರೀತರಾಜ್ಯಃಕಲಿಯುಗಬಲ ಪಂಕಾವಸನ್ನಧರ್ಮ್ಮ
11 ವೃಷೋದ್ಧರಣನಿತ್ಯಸನ್ನದ್ಧಃ ಶ್ರೀಮಾನ್ಮಾಧವ ಮಹಾಧಿರಾಜಃ ತತ್ಪುತ್ರಃ ವಿದ್ಯಾವಿನಯಾತಿಶಯ
12 ಪರಿಪೂರಿತಾತ್ಮಾನಿರವಗ್ರಹ ಪ್ರಧಾನಶೌರ್ಯಃ ಶ್ರೀಮದವನೀತ ನಾಮಧೇಯಃ ತಸ್ಯಪುತ್ರಃ ವಿಜ್ರ
13 ಮ್ಭಮಾಣಶಕ್ತಿತ್ರಯಃ ಅನ್ದರಿ ಆಲತ್ತೂರ್ಪ್ಪೊರುಳರೆಪೆಟ್ಟ [ಗ] ರಾದ್ಯನೇಕಸಮರ ಮುಖಮಖ

14 ಹುತಪ್ರಹತ ಶೂರಪುರುಷ ಪಶೂಪಹಾರವಿಘಸವಿಹಸ್ತೀಕೃತಾನ್ತಾಗ್ನಿಮುಖಃ ಕಿರಾತಾರ್ಜುನೀಯಪ
15 ಞ್ಚದಶಸ್ಸರ್ಗಟೀಕಾಕಾರೋ ದುರ್ವ್ವಿನೀತನಾಮಧೇಯಃ ತಸ್ಯಪುತ್ರಃ ದುರ್ದ್ದಾನ್ತವಿಮರ್ದ್ದ ವಿಮೃದಿತವಿಶ್ವಮ್ಭ
16 ರಾಧಿಪಮೌಲಿಮಾಲಾಮಕರನ್ದಪುಞ್ಜಪಿಞ್ಜರೀಕ್ರಿಯಮಾಣಚರಣಯುಗಲನಳಿನಃ ಮುಷ್ಕರನಾ.
17 ಮಧೇಯಃ ತಸ್ಯಪುತ್ರಃ ಚತುರ್ದ್ದಶವಿದ್ಯಾಸ್ಥಾನಾಧಿಗತವಿಮಲ ಮತಿಃ ವಿಶೇಷತೋನವಶೇ
18 ಷಸ್ಯನೀತಿಶಾಸ್ತ್ರಸ್ಯವಕ್ತೃಪ್ರಯೋಕ್ತೃಕುಶಲೋರಿಪುತಿಮಿರನಿಕರ ನಿರಾಕರಣೋದಯಭಾಸ್ಕ
19 ರಃಶ್ರೀವಿಕ್ರಮ ಪ್ರಥಿತನಾಮಧೇಯಃ ತಸ್ಯಪುತ್ರಃ ಅನೇಕಸಮರಸಂಪಾದಿತ ವಿಜೃಮ್ಭಿತದ್ವಿರ
20 ದರದನಾಕುಲಿಶಾಭಿಘಾತಃ ವ್ರಣಸಂರೂಢಭಾಸ್ವದ್ವಿಜಯಲಕ್ಷಣ ಲಕ್ಷೀಕೃತ ವಿಶಾಲ
21 ವಕ್ಷಸ್ತಲಃ ಸಮಧಿಗತಸಕಲ ಶಾಸ್ತ್ರಾರ್ತ್ಥತತ್ವಃ ಸಮಾರಾಧಿತ ತ್ರಿವರ್ಗ್ಗಃ ನಿರವದ್ಯಚರಿತಪ್ರ್ವತ್ತಿ

III (*a*) 22 ದಿನಮಭಿವರ್ಧಮಾನ ಪ್ರಭಾವೋಭೂವಿಕ್ರಮ ನಾಮಧೇಯಃ ಅಪಿಚನಾನಾಹೇತಿಪ್ರಹಾರಪ್ರ
23 ವಿಘಟಿತಘಟೋರಃ ಕವಾಟೋತ್ಥಿತಾಸೃಕ್ಪ್ರಾರಾಶ್ವಾದಪ್ರಮತ್ತದ್ವಿಪಶತಚರಣಕ್ಷೋದ ಸಂಮರ್ದ್ದಭೀಮೇ
24 ಸಂಗ್ರಾಮೇಪಲ್ಲವೇನ್ದ್ರನರಪತಿಮಜಯದ್ಯೋವಿಳನ್ದಾಭಿಧಾನೇ ರಾಜಾ ಶ್ರೀವಲ್ಲಭಾಖ್ಯಸ್ಸಮರ
25 ಸತಜಯಾವಾಪ್ತ ಲಕ್ಷ್ಮೀವಿ [ಶಾಲಃ] ತಸ್ಯಾನುಜೋನತ ನರೇನ್ದ್ರ ಕಿರೀಟಕೋಟಿರತ್ನಾರ್ಕ್ಕ
26 ದೀಧಿತಿವಿರಾಜಿತಪದ [ಪಾದ] ಪದ್ಮಃ ಲಕ್ಷ್ಮ್ಯಾಸ್ಸ್ವಯಂವೃತಪತಿರ್ನ್ನವ ಕಾಮನಾಮಾಸ್ಪಷ್ಟಪ್ರಿಯೋ
27 ರಿಗಣವಿದಾರುಣ ಗೀತಕೀರ್ತ್ತಿ ತಸ್ಯಕೊಂಗುಣಿ ಮಹಾರಾಜಸ್ಯ ಶಿವಮಾರಪ [ರ] ನಾಮಧೇಯಃ
28 ಪೌತ್ರಃ ಸಮವನತ ಸಮಸ್ತ ಸಾಮನ್ತಮಕುಟ ಘಟ್ಟಿತಬಹಲರತ್ನವಿಲಸದಮರಧನು

III (*b*) 29 ಷ್ಷಣ್ಡಮಣ್ಡಿತ ಚರಣನಖಮಣ್ಡಲಃ ನಾರಾಯಣಚರಣ ನಿಹಿತಭಕ್ತಿಃ ಶೂರಪುರುಷತುರ
30 ಗ ನರವಾರಣ ಘಟ್ಟಸಂಘಟ್ಟದಾರುಣ ಸಮರಸಿರಸಿನಿಹಿತಾತ್ಮ ಕೋಪೋಭೀಮಕೋಪಃ
31 ಪ್ರಕಟರತಿಸಮಯ ಶಮನುವರ್ತನ ಚತುರಯುವತೀಜನಲೋಕ ಧೂರ್ತ್ತೋರೋಕಧೂರ್ತ್ತಃ ಸುದು
32 ರ್ದ್ದರಾನೇಕ ಯುದ್ಧಮೂರ್ದ್ಧಲಬ್ಧವಿಜಯ ಸಂಪದಹಿತಗಜಘಟಾಕೇಸರೀರಾ
33 ಜ ಕೇಸರೀ ಅಪಿಚ ಯೋ ಗಂಗಾನ್ವಯ ನಿರ್ಮ್ಮಲಾಂಬರ ತಲವ್ಯಾಭಾಸನಪ್ರೋಲ್ಲ
34 ಸನ್ಮಾರ್ತ್ತಣ್ಡೋರಿಭಯಂಕರಃ ಸುಧಕರ ಸನ್ಮಾರ್ಗರಕ್ಷಾಕರಃ ಸೌರಾಜ್ಯಂ ಸಮುಪೇತ್ಯರಾಜಸ
35 ಮಿತೌರಾಜನ್ಗುಣೈರುತ್ತಮೈರಾಜಾ ಶ್ರೀಪುರುಷಶ್ಚಿರಂವಿಜಯತೇ ರಾಜನ್ಯಚೂಡಾಮಣಿಃ

IV (*a*) 36 ಕಾಮೋರಾಮಾಸುಚಾಪೇದಶರಥತನಯೋವಿಕ್ರಮೇಯಾಮದಗ್ನ್ಯಃಪ್ರಾಜ್ಯೈಶ್ವರ್ಯೇವಲಾರಿ
37 ರ್ಬಹು ಮಹಸಿರವಿ ಶ್ವಪ್ರಭುತ್ವೇಧನೇಶಃಯೋವಿಖ್ಯಾತಶಕ್ತಿಸ್ಸುಟತರಮಖಿಲ ಪ್ರಾಣಭಾ
38 ಜಾಂ ವಿಧಾತಾಧಾತ್ರಾಸೃಷ್ಟಪ್ರಜಾನಾಂ ಪತಿರಿತಿಕವಯೋಯಂಪ್ರಶಸನ್ತಿನಿತ್ಯಂಸತು ಪ್ರತಿದಿನಪ್ರವೃ
39 ತ್ತ ಮಹಾದಾನ ಜನಿತಪುಣ್ಯಾಹಘೋಷಮುಖರಿತ ಮನ್ದಿರೋದರೇಣ ಶ್ರೀಪುರುಷ ಪ್ರಥಮನಾಮಧೇ
40 ಯಃ ಪೃಥಿವೀಕೊಂಗುಣಿ ಮಹಾರಾಜಾಧಿರಾಜಃ ಶ್ರೀ ಬಾಣವಂಶೋದ್ಭವ ಶ್ರೀ ದಿಣ್ಡಿಗರಕ್ಕಬ್ಬಪ್ಪನಾಡು ಸಾಸಿರ
41 ದೆಟ್ಟೊಡಿ ಮಾನಾಳುತ್ತಿಟ್ಟ ಶ್ರೀಪುರುಷಮಹಾರಾಜರ್ಗೆ ಬಿನ್ನಪ್ಪಗೆಯ್ದು ದಕ್ಷಿಣಾಯನವಿಷುಪತತ್ಕಾ
42 ಲದುಳ್ ಸುಗೋತ್ರಗಾರ್ಗ್ಯ ಜನಾರ್ದನಾಸ್ತಸ್ಯಕೇಶವಭಟ್ಟಸ್ಯ ನಾಮತಸರ್ವ್ವಶಾಸ್ತ್ರಾಸ್ಯಜನಾತಿ

IV (*b*) 43 ಕೌಸಿಕಗೋತ್ರ ನಾಗಶರ್ಮ್ಮ ಪ್ರವರಕಾಶ್ಯಪಗೋತ್ರಶ್ಚೇತಿ । ಇ [ಈ] ಮೂವರ್ಗ್ಗಂ ಮೂಱುಭಾಗಮಾಗೆಕೊವ
44 ಳೆ ವೆಟ್ಟುನಾಪುಗ್ರಾಮಂ ಬ್ರಹ್ಮದೇಯಂದತ್ತಃ ದಿಣ್ಡಿಗೆನಾಡೆಯರುಂ ಕೊನ್ದಡಿಯುಂ ಪೆರ್ಗ್ಗಡೆತ್ತನಂಗೆಯೆ ನಗರೂರ
45 ಬೆಳ್ಳಿಯರುಂ ಮರವೂರವಣ್ಣಾಕರುಂ ಕಲ್ಲದುಪಿನಮಾದಡಿಯು ಮೊದೂರಜಿಯಚಾಯರುಂ ನರಸಾಕ್ಷಿ ।
46 ಪದೆಯಂ ಮೂಱುಮಾಸೆ । ಸೀಮಾನ್ತರ ಮೂಡಾಯೊಳಗೆಱೆಯ ಪಾದರಿ ಎ ಅನ್ತೆಅಬನ್ದು ಕೆಱೆಯುಳ್ಳೊ
47 ಡಿ ಪೆರ್ಪ್ಪಳ್ಳಮೆಸನ್ದು ಪಡುವಾಯ್ನೋಡಿಪೆರ್ವುಣಸೆಎತಂಕಾಯ್ತುಲೆ ಮೊಱಿಡೆಬೆದಿಕೆಱೆಎ ಮೊದ
48 ಳೆ ಮಡುವೆಪಡುವಾಯ್ವೆಳ್ಗೊಳಕಾಲುವೆವದುವುಂಒಳಗಾಗೆ ತೊರೆಎ ಬಡಗಾಯ್ಕಡವಿಗೆಱೆಎ
49 ಅನ್ತೆ ವನ್ದು ಮಞ್ಜಾಳ್ತೊಣೆಎ ಬಾಡೊ ಟ್ವೆಎಸನ್ದು ಸೋಱರ್ಮ್ಮರಡಿಎ ಅನ್ತೆಬನ್ದು ಬಾನ್ನಿಗಾರ್ಲಕುಪ್ಪೆ

V (*a*) 50 ಯೆವಾಪೊ ಟ್ವೆಯೆಸನ್ದು ಪಾದರಿಯೊಳ್ಕೂಡಿತ್ತುಸೀಮೆ ಶ್ರೀ ಸ್ವದತ್ತಂಪರದತ್ತಾನ್ವಾಯೋ
51 ಹರೇತಿಬಶುನ್ದರಾಷಷ್ಠಿಬರಿಷಸಹಸ್ರಾಣಿವಿಷ್ಟಾಯಂಜಾ [ಯ] ತೇಕೃಮಿಬಹುಭಿರ್ವ್ವ
52 ಸುಧಾಭುಕ್ತ್ವರಾಜಭಿಶಗರಾಜಭಿಯಸ್ಯಯಸ್ಯಯತೋಭೂಮಿತಸ್ಯತಸ್ಯತದಾಪಲಂ
53 ಬ್ರಹ್ಮಸ್ವನ್ತುವಿಷಂಘೋರಂನವಿಷಂವಿಷಮುಚ್ಯತೇ । ವಿಷಮೇಕಾಕಿನಂಹನ್ತಿಬ್ರಹ್ಮಸ್ವಂಪುತ್ರಪೌತ್ರಿಕಂ ॥

---

## 119

### ಮೈಸೂರು ತಾಲ್ಲೂಕು.

ಮೈಸೂರು ಓರಿಯಣ್ಟಲ್ ಲೈಬ್ರರಿ ಚಕ್ರವರ್ತಿ ಶ್ರೀನಿವಾಸಾಚಾರ್ಯರಿಂದ ಬಂದ ತಾಮ್ರಶಾಸನದ ೨ ಹಲಗೆಗಳು.

(ಚಂದ್ರ+ಚಕ್ರ—ವಡಗರೆನಾಮ—ಶಂಖ+ಸೂರ್ಯ.)

I (*a*) 1 ಉತ್ತರೇಸಹ್ಯಜಾತೀರೇಸರ್ವಸ್ಥಾನಸಮುಚ್ಚಯ
2 ನಾರಾಯಣಗಿರೌಶ್ರೀಮಾನ್ ಅಸ್ತೇನಾರಾಯ

3 ಣಾನ್ವಯಂ ॥ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾ
4 ಲಿವಾಹನ ಶ್ರೀವರ್ಷಮಹಾ ॥ ॥ ರಾಜಾ
5 ಧಿರಾಜ ರಾಜಪರಮೇಶ್ವರ ನರಪತಿ ವಿಪ್ರಾರ್ಥ
6 ಮೋಕ್ಷಪುರಿ ಅರಿರಾಯರಗಂಡ ಚತು
7 ಸಮುದ್ರಾಧಿಪತಿ ಪ್ರತಾಪ ವಿರೂಪಾಕ್ಷ ಮ
8 ಹಾರಾಯರು ಸುಖಸಂಬವವಿನೋದ
9 ದಿಂದ ಪೃಥ್ವಿಸಾಂಬ್ರಾಜ್ಯಂಗೈಉತಿರಲು ।
10 ಶಕವರ್ಷಂಗಳು ೧೩೯೦ನೆ ಸಂದುವರ್ತಮಾ
11 ನವಾದ ಸರ್ವಜಿತು ನಾಮಸಂಪಶರದ ಪಾ
12 ಲ್ಗುಣ ಶು ೧೫ಲ್ಲು ಜ್ಞಾನಮಂಟಪ ಪರಾಭಿ
13 ದಾನ ದಕ್ಷಿಣಬದರಿಕಾಶ್ರಮ ಶ್ರಿಯಾದಾ
14 ವ ಗಿರ್ರಿಯಾದಾ ॥

I (*b*)
15 ಶ್ರೀತಿರುನಾರಾಯಣಪುರದ ಶ್ರೀ ನಾರಾಯಣ ದೇ
16 ವರಿಗೆ ಅಭಿನವಕುಲಶೆಖರನಾದಾ ಶ್ರೀಮರ್ಕ
17 ಮಹಾಪ್ರದಾನಾ ತಿಂಮಂಣ ಡಾಣಯಕಉಡೆ
18 ಯರು ಶ್ರೀ ನಾರಾಯಣ ದೆವರ ಪಾದ ಪಾದ ಪ
19 ದ್ಮಂಗಳಿಗೆ ಸಮರ್ಪಿಶಿದ ಗ್ರಾಮ ಹೊಗರನಾಡಿ
20 ಗೆ ಶೆರಿದ ಕದಲಗೆರೆ ಗ್ರಾಮ ೧ಕೆ ಘಟಿಗ ೧೧೫ ವ
21 ರಹಾಕ್ಕೆ ನಡದು ಬರೂಶೆವೆವಿವರರಾತ್ರೆ ಅವ
22 ಸರ ತಳಿಗೆ ಅಪ್ಪೈದಕೆ ದಿನ ೧ಕೆ ₹೧।।ರಲ್ಲೂ ವರುಷ
23 ೧ಕೆ ೫೪ ವರಹಾ ಅಂಮ್ಮನವರ ಶಯನೋತ್ಸವದ
24 ಶೆವೆಗೆ ೪೦ ವರಹಾ ನಾರಾಯಣದೇವರ ನಂದ
25 ಧಿಪಕೆ ೧೮ ವರಹಾ ಅರ್ಥಕೆಗೆ ೩ ವರಹಾ ಅಂ
26 ತು ೧೧೫ ವರಹಾವಂನು ಸಮರ್ಪಣೆಯಂ

II (*a*)
27 ಣೆ ಯಂನ್ನೂ ಮಾಡಿ ಈ ಗ್ರಾಮದ ಗಉಡ
28 ಕಲ್ಯಾಣಗವುಡ ಯಾ ಗ್ರಾಮದ ಕೊಡಿ
29 ಗೆ ನಾರಾಯಣ ದೇವರಿಗೆ ಪಶ್ಚಿಮ ದಿಕನ ।
30 ಹೊಲಕೆ ಬಿಜವರಿ ಖ .।. ಜೊರೆ ದೆವರಿಗೆ
31 ಪೂರ್ವ ದಿಕಿನ ಹೊಲ ಬಿಜವರಿ ॥೦ ೩ ಕ
32 ಲ್ಯಾಣ ಗಉಡನಿಗೆ ಪೂರ್ವದಿಕಿನ ಹೊ
33 ಲ ಬಿಜವರಿ ॥೦ ೪ ಶ್ಯಾನುಭಾಗ ರಾಮಾ ।
34 ನುಜಗೆ ದಕ್ಷಿಣದಿಕಿನ ಹೊಲ ಬಿಜ
35 ವರಿ ॥೦ ೪ ಯಾ ಮೇರೆ ಗ್ರಾಮವನ್ನೂ
36 ನಾರಾಯಣ ದೆವರಿಗೆ ಸಮರ್ಪಣೆ ಮಾ
37 ಡಿ ಯಿಥೆ ॥ ಶ್ಲೋ ॥ ದಾನಪಾಲನಯೊ
38 ರ್ಮಥ್ಯೆದಾನಾಚ್ಛ್ರೇಯೋನಪಾಲನಂ ! ದಾ
39 ನಾಸ್ವರ್ಗಮವಾಪ್ನೊತಿ ಪಾಲನಾದ ಚ
40 ತಂಪದಂ ॥ ಸ್ವದತ್ತಾದ್ವಿಗುಣಂ ಪುಣ್ಯಂ ।
41 ಪರದತ್ತಾನುಪಾಲನಂ । ಪರದತ್ತಾಪಹಾ
42 ರೇಣ । ಸ್ವದತ್ತಂನಿಸ್ಪುಲಂಭವೇತ್ ॥ ಶ್ರೀ

II (*b*)
43 ಯಾದವ ಗಿರಿಗೆ ಪೂರ್ವ ಲೂಕಪಾವನೆಗೆ ಪ
44 ಶ್ಚಿಮ ನಾಗಮಂಗಲಕೆ ದಕ್ಷಿಣ ಕಾವೆರಿಗೆ ಉತ್ತ
45 ರದಲ್ಲಿ ಯಿರುವ ಕದಲಗೆರೆ ಗ್ರಾಮವಂನು ಶ್ರೀ
46 ನಾರಾಯಣ ದೆವರ ಪಾದಕೆ ತಿಂಮಂಣ ಡಣಂ ।
47 ಯಕಧರ್ಮ ಶ್ರೀ

## 120

ಮೈಸೂರು ಹೋಬಳಿ ನಾಚನಹಳ್ಳಿ ಗ್ರಾಮಕ್ಕೆಸೇರಿದ ದಳವಾಯಿ ಕೆರೆಗೆ ಉತ್ತರಕ್ಕೆ ನಿಲ್ಲಿಸಿರುವ ಕಲ್ಲು.

ಸೂರ್ಯ ○ 1 ಶ್ರೀ ಚಂದ್ರ

2 ಶ್ರೀಮದ್ರಾಜಾಧಿರಾಜ
3 ಕೃಷ್ಣರಾಜ ಒಡಯರವ
4 ರು ಅವಲಬಾರ ಕಚೆರ್‍ರಿ
5 ಬಕ್ಷಿ ಗುರಾಂವು ಮಹಂ

6 ಮ್ಮದರ್ಖಾನರ್ರಿಗೆ ಪುತ್ರಪ
7 ಪುತ್ರ ಪಾರಂಪರ್ಯವಾಗಿ ನ
8 ಡಯುವ ಮ್ಮರೆಗೆ ಕೊಟ್ಟ
9 ಸರ್ವಮಾನ್ಯವಾದ ನಾ
10 ಚನಹಳ್ಳಿ ಗ್ರಾಮದ
11 ಯರ್ದ್ಲ ಕಲ್ಲು.

## 121

ನಂಜನಗೂಡು ತಾಲ್ಲೂಕು ಕಸಬಾ ಹೋಬಳಿ ನರಸಾಂಬುಧಿ ರೈಲ್ವೆ ಸ್ಟೇಷನ್ಗೆ ಎದುರುಭಾಗದಲ್ಲಿ ಸುಮಾರು ಅರ್ಧಮೈಲಿ ದೂರದಲ್ಲಿರುವ ತೋಟದಲ್ಲಿ ಹಾಳುಬಾವಿ ಬಳಿ ನಟ್ಟ ಕಲ್ಲು.

1 ಶುಭಮಸ್ತು ಶುಭಕೃತು ಸಂ
2 ವತ್ಸರದ ವಯಿಶಾಖ ಶು ೧ ಲು
3 ದೇವರಸಯ್ಯನವರ ನಿರೂ
4 ಪದಿಂದ ಕೋದಮರಸಯ್ಯ
5 ನವರು ಶ್ರೀ ದೇವರ ಕಾರ್ಯಕ್ಕೆ
6 ಬಿಟ್ಟುದು ಗದ್ದೆ ಹೊಲ
7 ........ಕ್ಕೆ ಮೂಡಲು ಹಳ್ಳ
8 ......ತೆಂಕ........ನಡೆ......
9 ..........ಇದನು............
10 ಪಾಪಿ....................

## 122

ನಂಜನಗೂಡು ತಾಲ್ಲೂಕು ಕವಲಂದೇ ಹೋಬಳಿ ದೇವನೂರು ಗುರುಸ್ವಾಮಿ ಮಠದ ಸ್ವಾಮಿಗಳ ವಶದಲ್ಲಿದ್ದ ತಾಮ್ರಶಾಸನ.

5 ಹಲಗೆ, ಉಂಗರ ಜೈನವಿಗ್ರಹದ ಮೊಹರು.

I (*b*) 1 ಸವೊವ್ಯಾತ್ಫೇಧಸನ್ನಾಧಮಯನ್ನಾಭಿಕಮಲಂಕೃತಂ। ಹರಶ್ಚಯಸ್ಯಕಾನ್ತೇನ್ದು ಕಳಯಾಕಮಲಂಕ್ರಿ
2 ತಂ ಭೂಪೋಭವತ್ ಬೃಹದುರಸ್ತಲರಾಜಮಾನ ಶ್ರೀಕೌಸ್ತುಭಾಯತಕರ್ಕೈರುಪಗೂಢಕಣ್ಠಃ ಸತ್ಯಾನ್ವಿತೊ
3 ವಿಪುಲಬಾಹು ವಿನಿರ್ಜಿತಾರಿಚಕ್ರೋಪ್ಯಕೃಷ್ಣಚರಿತೋ ಭುವಿ ಕೃಷ್ಣರಾಜಃ ಪಕ್ಷಚ್ಛೇದ ಭಯಾಶ್ರಿತಾಖಿಲಮ
4 ಹಾಭೂಭೃತ್ಕುಲ ಭ್ರಾಜಿತಾತ್ ದುರ್ಲ್ಲಂಘ್ಯಾದಪರೈಕ (ರ)ನೇಕವಿಪುಲಭ್ರಾಜಿಷ್ಣುರತ್ನಾನ್ವಿತಾತ್ ಯಶ್ಚಾಳು
ಕ್ಯ ಕುಲಾ
5 ದನೂನವಿಬುಧಾ ವ್ರಾತಾಶ್ರಯೋ ವಾರಿಧೇಃ ಲಕ್ಷ್ಮೀಮ್ಮನ್ದರವತ್ಸಲೀಲಮಚಿರಾದಾಕೃಷ್ಟವಾನ್ವಲ್ಲ(ಭ)
6 ಭಃ ತಸ್ಯಾಭೂತ್ತನಯಃಪ್ರತಾ (ಪ) ವಿಸರೈರಾಕ್ರಾನ್ತದಿಙ್ಮಣ್ಡಲಶ್ಚಣ್ಡಾಂಶೋಸ್ಸದೃಶೊಪ್ಯ ಚ
7 ಣ್ಡಕರತೊಪ್ರಹ್ಲಾದಿತಕ್ಷ್ಮಾಧರೋ ಧೋರೋಧೈರ್ಯ್ಯಧನೋವಿಪಕ್ಷ ವನಿತಾವ ಕ್ತ್ರಾಂಬುಜ ಶ್ರೀಹರೋಹಾ
8 ರೀಕೃತ್ಯಯಶೋಯದೀಯಮನಿಶನ್ದಿಙ್ನಾಯಿಕಾಭಿರ್ಧೃತ (ಂ) ಜ್ಯೇಷ್ಠೋಲ್ಲಂಘನಜಾತಯಾಪ್ಯಮಲಯಾಲ
9 ಕ್ಷ್ಮ್ಯಾಸಮೇತೊಪಿಸನ್ ಯೋಭೂನ್ನಿಮ್ಮರ್ಲಮಣ್ಡಲಸ್ತಿತಿಯುತೊದೋಷಾಕರೊನಕ್ವಚಿತ್ ಕಣ್ಣಾರ್ಥಃಕೃತದಾ
10 ನಸನ್ತತಿಭೃತೊ ಯಸ್ಯಾನ್ಯದಾನಾಧಿಕನ್ದಾನಂವೀಕ್ಷ್ಯಸುಲಜ್ಜಿತಾ ಇವದಿಶಾಮ್ಪ್ರಾನ್ತೇಸ್ಥಿತಾದಿಗ್ಗ

II (*a*) 11 ಜಾಃ ಅನ್ಯೈರ್ನ್ನಜಾತುವಿಜಿತಂಗುರುಶಕ್ತಿಸಾರಮಾಕ್ರಾನ್ತಭೂತಲಮನನ್ಯಸಮಾನವಾ(ನಾ)ಯೇನೇ
12 ಹಬದ್ಧಮತ (ವ) ಲೋಕ್ಯಚಿರಾಯಗಂಗನ್ದೂರೇ (ರ) ಸ್ವನಿಗ್ರಹಭಿಯೇ ತ (ವ) ಕಲಪ್ರಯಾತಃ ಏಕತ್ರಾತ್ಮಬ
13 ಲೇನವಾರಿನಿಧಿ ನಾಪ್ಯನ್ಯತ್ರರುಧ್ವಾಘನ ನ್ನಿಷ್ಕ್ರ್ಯಷ್ಟಾಸಿಭಟೋದ್ಧತೇನ ವಿಹರತ್ತಾಳಾತಿಭೀಮೇನ
14 ಚ ಮಾತಙ್ಗಾನ್ಮದವಾರಿನಿರ್ಝರಮುಚಃ ಪ್ರಾಪ್ಯಾನ ತಾತ್ಪಲ್ಲವಾತ್ ತಚ್ಚಿತ್ರಾ (ತ್ರಂ) ಮದಲೇಶಮಪ್ಯ
ನುದಿ
15 ನಂ ಯಸ್ಸ್ವಪ್ನವಾನ್ನಕ್ವಚಿತ್ ಹೇಲಾಸ್ವೀಕೃತಗೌಬರಾಜ್ಯ ಕಮಲ ನ್ಮಾನ್ತಃ ಪ್ರವೇಶ್ಯಾಚಿರಾ
16 ದುನ್ಮಾರ್ಗೇಮರು ಮಧ್ಯಮಪ್ರತಿ ಬಲೈರ್ಯೋವತ್ಸರಾಜಮ್ಬಲೈಃ ಗೌಡೀಯಂಶರದಿನ್ದುಪಾದ
17 ಧವಳಚ್ಛತ್ರದ್ವಯಂ ಕೇವಲಂ ? ತಸ್ಮಾದಾಹೃತತದ್ಯಶೋಪಿಕ ಕುಭಾಮ್ಪ್ರಾನ್ತೇಸ್ಥಿತನ್ತತ್ಕ್ಷಣಾತ್
18 ಲಬ್ಧಪ್ರತಿಷ್ಠಮಚಿರಾಯುಕಲಿಂಸುದೂರಮುತ್ಸಾರ್ಯ ಶುದ್ಧಚರಿತೈರ್ಧರಿಣೀತಲಸ್ಯಕೃತ್ವಾಪುನಃ
19 ಕೃತಯುಗಶ್ರಿಯಮಪ್ಯಶೇಷಚಿತ್ರಂಕಥನ್ನಿರುಪಮಃ ಕಲಿವಲ್ಲಭೊ ಭೂತ್ ಪ್ರಾಭೂತ್ತ
20 ಮ್ಮರ್ಪರಾತ್ತತೊನಿರುಪಮಾದಿನ್ದುಯ್ಯಥಾವಾರಿಧೇಶುದ್ಧಾತ್ಮಾ ಪರಮೇಶ್ವರೊನ್ನತ ಶಿರಸ್ಸಂಸಕ್ತ

II (*b*) 21 ಪಾದಸ್ತಥಾಪತ್ಮಾನನ್ದಕರಃಪ್ರತಾಪಸಹಿತೋನಿತ್ಯೋದಯಃ ಸೋನ್ನತೇಃ ಪೂರ್ವಾದ್ರೇರಿವಭಾನುಮಾನ
22 ಭಿಮತೋಗೋವಿನ್ದರಾಜಸುತಾ ಯಸ್ಮಿನ್ಸರ್ವಗುಣಾಶ್ರಯಕ್ಷಿತಿಪತೌಶ್ರೀರಾಷ್ಟ್ರ ಕೂಟಾನ್ವಯೇಜಾತೇ
23 ಯಾದವವಂಶವನ್ಮಧುರಿಪಾವಾಸೀದಲಂಘ್ಯಃ ಪರೈಃ ದೃಷ್ಟ್ವಾಸಾವಧಯಃ ಕೃತಾಸ್ಸದೃಶಾಃ
24 ದಾನೇನಯೇನೋದ್ಧತಾಃ ಮುಕ್ತಾಹಾರವಿಭೂಷಿತಾಃ ಸ್ಫುಟಮಿತಿಪ್ರತ್ಯರ್ತ್ಥಿನೋಪ್ಯರ್ತ್ಥಿನಾಃ ಯಸ್ಯಾಕಾ
25 ರಮಮಾನುಷಂತ್ರಿಭುವನವ್ಯಾಪತ್ತಿರಕ್ಷೋಚಿತಂ ಕೃಷ್ಣಸ್ಯೇವನಿರೀಕ್ಷ್ಯಯಚ್ಛತಿಪದಂಯದ್ವ್ಯಾ
26 ಧಿಪತ್ಯಂಭುವಃ ಅಪ್ರಾನ್ತಾತತವೇಯ ಮಪ್ರತಿಹತಾದತ್ವಾತ್ತ್ವಯಾಕಣ್ಠಿಕಾಕಿನ್ತ್ವಜ್ಞೈವ
27 ಮಯಾಧ್ವತೇತಿಪಿತರಂಯುಕ್ತಂ ಸತತಪ್ರಭು [ಭ್ಯ] ಥಾತ್ ತಸ್ಮಿನ್ಸ್ವರ್ಗವಿಭೂಷಣಾಯಜನನೇಯಾತೇಯ
28 ಶಶ್ಯೇಷತಾವೇಕೀ ಭೂಯುಸಮುದ್ಯತಾನ್ವಸುಮತೀ ಸಂಹಾರಮಾಧಿತ್ಸಯಾವಿಢ್ಭಯಾನ್ಸಹಸಾ
29 ಪೃಥತ್ತನೃಪತೀನೇಕೋಪಿಯೋದ್ವಾದಶಖ್ಯಾತಾನಪ್ಯಧಿಕಪ್ರತಾಪಸಹಿತಾನ್ಸಂವರ್ತಕೋಲ್ಕಾನಿ
30 ವ ಯೇನಾತ್ಯನ್ತದಯಾಲುನಾಥನಿಗಳಕ್ಲೇಶಾದ ಪಾಸ್ಯಾನತಂ ಸ್ವನ್ದೇಶಂಗಮಿತೊಪಿದರ್ಪವಿಸ

III (*a*) 31 ರಾದ್ಯಃ ಪ್ರಾತಿಕೂಲ್ಯೇಸ್ಥಿತಃ ಲೀಲಾಭ್ರೂಕುಟಿಲೇ (ಲ) ಲಾಟಫಲಕೇಯಾವಚ್ಚನಾಲಕ್ಷ್ಯತೇ ವಿಕ್ಷೇಪೇಣ
ವಿಜಿ
32 ತ್ಯತಾವದಚಿರಾದಾಬದ್ಧಗಂಗಂಪುನಃ। ಸತ್ವಾಯಾಶುಶಿಲೀಮುಖಾಸ್ಸಸಮಯಾತ್ ಬಾಣಾಸನಸ್ಯೋ

33 ಪರಿಪ್ರಾಪ್ತಂವರ್ದ್ಧಿತಬನ್ದುಜೀವವಿಭವಂ ಪತ್ಮಾಭಿವೃಧ್ದ್ಯಾನ್ವಿತಂ ಸರ್ವ್ವಕ್ಷತ್ರಮುದೀಕ್ಷ್ಯಯಂ ಶರ
ದೃತು (೦) ಪ.

34 ಜ್ಜ್ರನ್ನ್ಯವತ್ಸೂರ್ಜ್ಜರೋನಷ್ಟಃ ಕ್ವಾಪಿಭಯಾತ್‍ತಥಾಪಿಸಮಯಂಸ್ವಪ್ನೇಪ್ಯಪಶ್ಯನ್ನ್ಯಥಾಯತ್ಸಾದಾನತಿ

35 ಮಾತ್ರಾಮೇಕಶರಣಾನಾಲೋಕ್ಯಲಕ್ಷ್ಮೀಧಿಯಾದೂರಾನ್ಮಾಳವನಾಯಕೊನಯಪರೋಯತ್ರಾ

36 ತಿ ಬದ್ಧಾಞ್ಜಲಿಃ ಯೋವಿದ್ವಾನ್ನಲಿನಾಸಹಾಲ್ಪಪಲವಾನ್ಸ್ಯ (ಸ್ವ) ದ್ವಾರ್ನಥತ್ರೇಪರಾನ್ನಿತೇಸೂತಿರ

37 ಸೌಯದಾತ್ಮಪರಯೋರಾಧಿಕ್ಯಸಂವೇದನಂ ವಿನ್ಧ್ಯಾದ್ರಿಃ ಕಟಕೇನಿವಿಷ್ಟಕಟಕಃಶ್ರುತ್ವಾಚರ್ಯೈರ್ಯ್ಯ

38 ನ್ನಿಜೈಸ್ಸಂದೇಶಂಸಮುಪಾಗತಾಃ ದ್ರುವಮಿತಿ ಜ್ಞಾತ್ವಾಧಿಯಾಪ್ರೇರಿತಃ ಮಾರಾಶರ್ವ್ವ ಮಹೀಪತಿ
ದ್ರ್ರತ.

39 ಮಗಾದಪ್ರಾಪ್ತಪೂರ್ವ್ವಮ್ಪುರೈಯ್ಯರ್ಸ್ಯೇಚ್ಛಾಮನುಕೂಲಯರ್‍ಕ[ಬ]ಲುಧನ್ಯೈಃಪಾದಪ್ರಣಾಮೈರಪಿನೀ

40 ತ್ವಾಶ್ರೀಭುವನೇಘನಾಘನಘನವ್ಯಾಪ್ತಂಪರಂಪ್ರಾವೃಷಂತಸ್ಮಾದಾಗತವಾರ್ಸಮುನ್ನಿಜಬ

III (b) 41 ಲೈರಾತುಙ್ಗಭದ್ರಾತಟಂ ತತ್ರಸ್ಥಃಸ್ವಕಾರಾಗತವ್ಯಾಕೃತಿಭಿನ್ನಿರ್ಶ್ಯೇಷಮಾಕೃಷ್ಟವಾವಿಕ್ಷೇಪೈರಪಿಚಿ

42 ತ್ರಮಾನತರಿಪುರ್ಜ್ಜಗ್ರಾಹತಂಪಲ್ಲವಾತ್ ಲೇಖಾಹಾರಮುಕೋದಿತಾರ್ಥವಚಸಾಯತ್ರನ್ಯವೇಙ್ಗೀಶ್ವ

43 ರೋನಿತ್ಯಂಕಿಂಕರವತ್‍ವ್ಯಥಾದವಿರತಂಕಮ್ಪಸ್ವಮಾತ್ಮೇಚ್ಛಯಾ ಬಾಹ್ಯಾಳೀಧೃತಿರಸ್ಯಯೇನರಚಿ

44 ತಾ ವ್ಯೋಮಾವಲಗ್ನಾರುಚಂಧಾತ್ರೀಮುಕ್ತಿಕಮಾಲಿಕಾಮಿವಧೃತೋಮೂರ್ಧ್ನಿಸ್ಫುತರಾಗಣ್ಯೈಃ ಸನ್ನಾ

45 ಸಾತ್ಸರಚಕ್ರರಾಜಕಮಗಾತ್‍ತತ್ಪೂರ್ವ್ವದೇವಾವಿಧಿವ್ಯಾಬದ್ಧಾಞ್ಜಲಿಶೋಭಿತೇನಶರ

46 ಣಮೂದ್ಧ್ನಾಯದಙ್ಘ್ರಿದ್ವಯಂ ಯದ್ಯಾಥತ್ತಪರಾರ್ದ್ಧ್ಯಭೂಷಣಗಣೈನ್ನಾಲಂಕೃತಂತತ್ತಥಾ ಮಾ

47 ಭೈಷೀರಿತಿಸತ್ಯಪಾಲಕಯಶಸ್ಥಿತ್ಯಾಯಥಾತತ್ಗಿರಾ ತೇನೇದಮನಿಲ ವಿದ್ಯುಚ್ಚಞ್ಚಲಮವಲೋಕ್ಯ

48 ಜೀವಿತಮಸಾರಂಕ್ಷಿತಿದಾನಮ್ಪರಮ್ಪುಣ್ಯಂ ಪ್ರವರ್ತ್ತಿತೊಬ್ರಹ್ಮದಾಯೋಯಂಸಚ ಪರಮಭಟ್ಟಾರ

49 ಕ ಮಹಾರಾಜಾಧಿರಾಜಪರಮೇಶ್ವರ ಶ್ರೀಮತ್‍ದ್ಧಾರಾವರ್ಷದೇಮಪಾದಾನುದ್ಧ್ಯಾನಪರಮಭಟ್ಟಾರಕ

50 ಮಹಾರಾಜಾಧಿರಾಜಪರಮೇಶ್ವರಪೃಥುವೀವಲ್ಲಭಪ್ರಭೂತವರ್ಷ ಶ್ರೀಮತ್ ಗೋವಿಂದರಾಜದೇವಃ

IV (a) 51 ಧಾರಾವರ್ಷಶ್ರೀವಲ್ಲಭಮಹಾರಾಜಾಧಿರಾಜಸ್ಯಪುತ್ರಃಶೌಚಾಚಾರಪ್ರಭುರಗುಣಗಣಪ್ರಣ

52 ಮಿತಸಮಸ್ತಲೋಕಃ ಪರೋಪಕಾರಕರುಣಾಪರಃ ಪರಮೇಶ್ವರಚರಣಾರವಿನ್ದವನ್ದನಾಭಿನನ್ದನಃ ರ

53 ಣಾವಲೋಕ ಶ್ರೀ ಕಮ್ಬರಾಜಃಪುನ್ನಾಡುಪಡೆನಾಡುವಿಷಯೇ ವಡನಗುಪ್ಪೆನಾಮಗ್ರಾಮಃ ತಲವ

54 ನನಗರಮಧಿವಸತಿವಿಜಯಸ್ಕನ್ಧಾವಾರೇತ್ರಿಂಶದುತ್ತರೇಷ್ವತೀತೇಷು ಶತವರ್ಷೇಷು ಕಾರ್ತ್ತಿಕಾ

55 ಮಾಸಪೌರ್ಣಮಾಸ್ಯಾಂ ರೋಹಿಣೀ ನಕ್ಷತ್ರೇ ಸೋಮವಾರೇ ಕೊಣ್ಡಕುನ್ದಾನ್ವಯಸಿಮ್ಬಲಗೆ

56 ಗೊರುಗುಣಕುಮಾರನನ್ದಿಭಟ್ಟಾರಕಸ್ಯಶಿಷ್ಯಃ ಎಳವಾಚಾರ್ಯಗುರುಃ ತಸ್ಯಶಿಷ್ಯೋವರ್ದ್ಧಮಾ

57 ನಗುರುಃಸರ್ವ್ವಪ್ರಾಣಿಹಿತಃ ಸಾಕ್ಷಾತ್‍ಸಿದ್ಧಾನ್ತನುಗವೋದ್ಧೃತಃ ಶಾನ್ತಸ್ಸರ್ವಜ್ಞಕಲ್ಪೋಯಂನಯೋನ್ನ

58 ತಗುಣೋನ್ನತಃ ತಸ್ಮೈತಂ ಗ್ರಾಮಮದಾತ್‍ಸ್ವಪುತ್ರಶ್ರೀ ಶಂಕರಗಣ್ಣ ವಿಜ್ಞಾಪನೇನ ಶ್ರೀಕಮ್ಬದೇವಃ
ಶ್ರೀ ವಿಜಯ

59 ವಸತಯೇ ತಲವನನಗರೇ ಪ್ರತಿಷ್ಠಿತಾಯ ತಸ್ಯಸೀಮಾನ್ತರಾಣಿ ಬಡಗಣದೆರೆಪೊಣಪ್ಪ

IV (b) 60 ೞ ಬಡಗಣ ಪಡುವಣ ಕೊನೆ ದುಪಾಣತ್ತಿಗಲ್ಲು ಪಡುವಣ ಸೀಮೆ ಕಡಬಗೆಱೆಯಪೆರ್ವ್ವಾ

61 ಗಂ ಪಡುವಣ ತೆಂಕಣ ಕೊನೆದು ಪೊಲ್ಗುಲ್ಪಟ್ಟಿತೆನ್ನೆಪ್ಪ ತೆಂಕಣ ಸೀಮೆ ಬೆಳಕೊಲತ್ತೆನ್ನೆ

62 ಪ್ಪ ತೆಂಕಣ ಮೂಡಣ ಕೊನೆದುಮುದು ವನ್ನಿಕಾಱಲುಮೂಡಣಸೀಮೆ ಕಳ್ಳಿವೆಟ್ಟಿನ ಮೂಡಣ ಪೊರೆ

63 ಯೆಮ್ಮಾಬಱಿಬೆಳ್ಡುಒಳಗುಮೂಡಣ ಬಡಗಣ ಕೊನೆದು ಬದನಿದಿಯ ಬಡಗಣ ಒಪ್ಪ

64 ಅಲು ಅಸ್ಯದಾನಸ್ಯ ಸಾಕ್ಷಿಣಃ ಷಣ್ಣವತಿಸಹಸ್ರವಿಷಯ ಪ್ರಕೃತಯಃ

65 ಯೋ ಸ್ಯಾಪಹರ್ತ್ತಾ ಲೋಭಾನ್ಮೋಹಾತ್ಪ್ರಮಾದೇನಚ। ಸಪಞ್ಚಭಿರ್ಮ್ಮಹದ್ಭಿಃ ಪಾತಕೈಸ್ಸಂಯುಕ್ತೋ

66 ಭವತಿ ಯೋ ರಕ್ಷತಿ ಸಪುಣ್ಯಭಾಗ್ಭವತಿ ಅಪಿಚಾತ್ರಮನುಗೀತ ಶ್ಲೋಕಾ ಶ್ರೀ ಸ್ವದತ್ತಾಂ ಪರದತ್ತಾಂ

67 ವಾ ಯೋಹರೇತವಸುನ್ಧರಾ ಷಷ್ಟಿಂವರ್ಷಸಹಸ್ರಾಣಿ ವಿಷ್ಟಾಯಾಂಜಾಯತೇ ಕ್ರಿಮಿಃ ಸ್ವನ್ದಾತುಂ

68 ಸುಮಹಚ್ಛಕ್ಯಂ ದುಃಖಮನ್ಯಸ್ಯಪಾಲನಂ ದಾನಂ [ವಾ]ಪಾಲನಂವೇತಿ ದಾನಾಚ್ಛ್ರೇಯೋನುಪಾ

V (a) 69 ಲನಂ ಬಹುಭಿರ್ವ್ವಸುಧಾಭುಕ್ತಾ ರಾಜಭಿಸ್ಸಗರಾದಿಭಿಃ ಯಸ್ಯಯಸ್ಯಯದಾಭೂಮಿ ತಸ್ಯ

70 ತಸ್ಯತದಾಫಲಂದೇವಸ್ವನ್ತುವಿಷಂ ಘೋರಂ ನವಿಷಂ ವಿಷಮುಚ್ಯತೇ ವಿಷಮೇಕಾಕಿನಂಹನ್ತಿ

71 ದೇವಸ್ವಂಪುತ್ರಪೌತ್ರಿಕ ವಿಶ್ವಕರ್ಮಾಚಾರ್ಯೇಣ ಲಿಖಿತ ಶ್ರೀ

## 123

ಅದೇ ದೇವನೂರಿಗೆ ಸಮೀಪದಲ್ಲಿರುವ ಹಳ್ಳದ ದಡದಲ್ಲಿ ಬಿದ್ದಿರುವ ಕಲ್ಲು.

1 ಶುಭಮಸ್ತು
2 ದೇವಗವುಡರಮಕ್ಕಳು
3 ರಾಚಪನಾಯಕರು
4 ಈ ದೇವರಕಟ್ಟೆಯನ್ನು
5 ಕಟ್ಟಿಸಿದರು ಶ್ರೀ ಶ್ರೀ ಶ್ರೀ

# ಶಿವಮೊಗ್ಗಾ ಡಿಸ್ಟ್ರಿಕ್ಟ್.

## ಶಿಕಾರಿಪುರ ತಾಲ್ಲೋಕ್.

### 124

ಶಿಕಾರಿಪುರ ತಾಲ್ಲೋಕು ಕಸಬಾ ಹೋಬಳಿ ಕಪ್ಪರಹಳ್ಳಿ ಗ್ರಾಮದ ಕೆರೆಯಕೆಳಗೆ ಚೆನ್ನಬಸಪ್ಪನವರ ಖಾತೆ ಜಮೀನಿನಲ್ಲಿ ನೆಟ್ಟಕಲ್ಲು.

ಪ್ರಮಾಣ '4—6"×1'—9"

1 ಸ್ವಸ್ತಿ ಸಮಸ್ತಭುವನಾಶ್ರಯಶ್ರೀ ಪ್ರಿಥ್ವೀವಲ್ಲಭಮ
2 ಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕಸ
3 ತ್ಯಾಶ್ರಯಕುಳತಿಳಕ ಚಾಳುಕ್ಯಾಭರಣ ಶ್ರೀ........
4 ತ್ರಿಭುವನ ಮಲ್ಲದೇವರ ವಿಜಯ ರಾಜ್ಯ...........
5 ರೋತ್ತರಾಭಿವೃದ್ಧಿಪ್ರವರ್ದ್ಧಮಾನಮಾ..........
6 ತಾರಂಬರಂ ಸಲುತ್ತುಮಿರೆ । ಸ್ವಸ್ತಿಯಮ............
7 ಮ ಸ್ವಾಧ್ಯಾಯ ಧ್ಯಾನಧಾರಣಮೌನಾ............ನುಷ್ಠಾ........
8 ಸಂಪನ್ನರಪ್ಪ ಶ್ರೀಮದನಾದಿಯಗ್ರಹಾರ............ಜೇಳ
9 ರಕ ಪದಮಹಾಜನಂಗಳು ಶ್ರೀಮತು............ಯಾ
10 ಹಿತಾಗ್ನಿಗಳಮಮ್ಮರ್ಬಮ್ಮಯ್ಯಗಳಮಗ........................
11 ನಮಗ ವಿಜಯಯ್ಯನುಂ ಮತ್ತಮವರಮಗ...............ಬಿ
12 ಟ್ಟಿಮಯ್ಯನುಂ ತಮ್ಮಭಕ್ತಿಶಕ್ತಿಯಿಂ ಪಾದಪೂಜೆಯಂ
13 ಕೊಟ್ಟುಚಾಳುಕ್ಯ ವಿಕ್ರಮಕಾಲದ ೧೮ನೆಯ ಶ್ರೀಮು
14 ಖ ಸಂವತ್ಸರದ ಪೌಷ್ಯ ಸುದ್ಧ ೧೩ ಸೋಮ
15 ವಾರದಸ್ದಿನುತ್ತರಾಯಣ ಸಂಕ್ರಾನ್ತಿಯನ್ದುನಂ
16 ಗೇರಿಯ ಬಯಲನಡುವೆ ತಾವು ಕಟ್ಟಿಸಿದ ಕೆಱೆ
17 ಯ ಕೀಳೇರಿಯಲ್ಲಿ ಪದೆದು ಬಿಟ್ಟಗದ್ದೆಗಣೆಗ
18 ನಮತ್ತಲೆರಡು ಹುದವೆರಡು ಈ ಧರ್ಮಮಂ ಪ್ರ
19 ತಿ ಪಾಳಿಸುವರ್ಗೆ ವಾರಾಣಸಿ ಕುರುಕ್ಷೇತ್ರದೊಳ್
20 ಸಾಯಿರ ಕವಿಲೆಯಂಕೋಡುಂಕೊಳಗುಮಂ........
21 ತ್ನಂಗಳಿಂ..................................
22 ದಗ್ರ್ಗಾಪುಣ್ಯಫಳಮಕ್ಕು ಈ ಧರ್ಮ್ಮಮನಾವ
23 ನಳಿದ ಮಹಾ.................................
24 ........................ಕಾಲೇಕಾಲೇಪಾಲನೀಯೋ
25 ಭವದ್ಭಿಃ ಸರ್ವಾನೇತಾನ್ಭಾವಿನಃಪಾರ್ಥಿವೇಂದ್ರಾನ್ಭೂ
26 ಯೋಭೂಯೋಯಾಚತೇರಾಮಚಂದ್ರಃ
27 ಈ ಕಲ್ಲಮಾಡಿಸಿದಂಬಿಯಣಬಟ್ಟಿಮಯ್ಯ ಬಿಟ್ಟ
28 ಟ್ಟ ಮಯ್ಯನುಂಬರೆದಸೇನಬೋವಕೇತಮಲ್ಲ
29 ಕಣ್ಡರಿಸಿದಸಮಯಕೀರ್ತ್ಯಾಚಾರ್ಯಶ್ರೀ

### 125

ಅದೇ ಕಪ್ಪರಹಳ್ಳಿ ಗ್ರಾಮದ ದೊಡ್ಡಕೆರೆಯ ಅಂಗಳದಲ್ಲಿ ಬಿದ್ದಿರುವ 1ನೆಯ ಕಲ್ಲು.

ಪ್ರಮಾಣ 3'-0"×1'-3"

1 ಶಕವರುಶಕ್ಕೆ ಸಾವಿರ
2 ದ ೩೨೮ನೆಯ ನಳ
3 ಸಂವತ್ಸರ ಪಾ
4 ಲ್ಗುಣ ಬ ೨ ಶುಕ್ರವಾ
5 ರದಲು ಕಪರಹಳಿ
6 ಯ ಮಲ್ಲೇಗವುಡರ
7 ಮಗ ಮಲ್ಲೇ
8 ಗಉಡನು ಸ್ವ
9 ರ್ಗಸ್ತನಾದ
10 ನು.

## 126

### ಅದೇ ಕಪ್ಪರಹಳ್ಳಿ ದೊಡ್ಡ ಕೆರೆಯ ಅಂಗಳದಲ್ಲಿ 2ನೆಯ ಕಲ್ಲು.

ಪ್ರಮಾಣ 5′–0″×2′–9″

1 ಸ್ವಸ್ತಿ ಶ್ರೀಜಯಾಭ್ಯುದ
2 ಯಶ್ಶಶಕ ವರುಶ ೧೩೪೮
3 ನೆಯ ನಡೆದ ವಿಶ್ವಾವಸು
4 ಸಂವತ್ಸರದ ಫಾಲ್ಗುಣ
5 ದ ಸು೧೧ ಮಂಗಳವಾ
6 ರದಲು ಶ್ರೀವೀರಪ್ರತಾಪದೇ
7 ವರಾಯರು ರಾಜ್ಯಂಗೈವಲಿ
8 ಕಪರಹಳಿಯ ಹುಯಲಲಿ
9 ನಾಚಯಪಲರನಿ
10 ಜುದು······ದೇವಲೋಕ
11 ಮ·········ಯಾತನ ಸತಿ
12 ಬೀರಬ್ಬೆ ಮಹಾಸತಿಯಾ
13 ದಳು ಜಕ್ಕೋಜನದೆಸನ

## 127

### ಅದೇ ಕಪ್ಪರಹಳ್ಳಿ ಗ್ರಾಮದ ಕೆರೆಯ ಅಂಗಳದಲ್ಲಿ 3ನೆಯ ಕಲ್ಲು.

ಪ್ರಮಾಣ 4′–6″×2′–9″

1 ಸ್ವಸ್ತಿ ಶ್ರೀ ವಿಜಯಾ
2 ಭ್ಯುದಯ ಶಕ
3 ವರುಶ ೧೩೩೨ ಸ
4 ಉಮ್ಮಸಂವತ್ಸರ
5 ದ ಪ್ರಥಮ ಭಾದ್ರ
6 ಪದ ಸ್ಸು ೩ ಗಿಲು
7 ವೀರಪ್ರತಾ
8 ಪ ಯಿಮ್ಮಡಿ·ದೇ
9 ವ ರಾಯಮ
10 ಹಾರಾಯರು
11 ಸುಖರಾಜ್ಯಂ
12 ಗೆಯಿಉತ್ತ್ರಂಯಿ
13 ರ್ದಕಾಲದಲಿ ಅ
14 ರಗದವೆಂಟಿಯ
15 ಕೆಸಲುವನೆಲುವಳಿ
16 ಗೆ ನಾಡವಳಗಣ ಕ
17 ಪ್ಪನಹಳ್ಳಿಯ ಮ
18 ಲ್ಲಗಉಡರ ಮಗ
19 ಬಯಿರಗಉಡನು ಸ್ವ
20 ರ್ಗಸ್ತನಾದನು ಮಂ
21 ಗಳ ಮಹಾ ಶ್ರೀ ಶ್ರೀ ಶ್ರೀ

## 128

### ಅದೇ ಕಸಬಾ ಹೋಬಳಿ ಕೊಟ್ಟಗ್ರಾಮದ ಗೌಡರ ಹೊಲದಲ್ಲಿ ಮಾಸ್ತಿಕಲ್ಲು.

1 ಮಲೆದ
2 ವರುಬಗೆ
3 ವಲಸಬೀಬಾ
4 ಯಿಸತಿ
5 ಯಾದಳು

## 129

### ಅದೇ ಕೊಟ್ಟಗ್ರಾಮದ ಕರಿಯವರ ಹಿತ್ತಲಿನಲ್ಲಿ ನಟ್ಟ ದೇವರಕಲ್ಲು.

ಪ್ರಮಾಣ 5′–6″×3′–6″

(ಈ ಶಾಸನವು ಪುರಾತನಾಕ್ಷರಗಳಿಂದ ಕೂಡಿದ್ದ ಕಾರಣ ಆ ಅಕ್ಷರಗಳನ್ನೆಲ್ಲಾ ಕೆತ್ತಿಸಿ ಪೇರೆಹೊಸದಾಗಿ ಶಾಸನವನ್ನು ಬರೆಸಿದ್ದಾರೆ.)

1 ಸ್ವಸ್ತಿ ಶ್ರೀಜಯಾಭ್ಯುದಯ ಶಾಲಿವಾಹನಶಕ ವರ್ಷಕೆ ಸಲುವ [೧೦೦೨೦೭]ನೆ ವರ್ಷಕೆ ಸಲುವ
2 ಕ್ರೋಧನ ಸಂವತ್ಸರದ ಶ್ರಾವಣ ಬಹುಳ ೮ ಮಿಾ ಪುಣ್ಯಕಾಲದಲು ಶ್ರೀಮನ್ ಮಹಾನಾಯಕಾಚಾಯ್ರ್ಯರಾದ
3 ಕಾಶಿ ಬಯಿರಪನಾಯಕರ ಕುಮಾರರಾದ ಚಿಕ್ಕಣನಾಯಕರು ಕೋಟಪುರದ ತಿರುವೆಂಗಳನಾ
4 ಥಗೆ ಸಮರ್ಪಿಸಿದ ಧರ್ಮ್ಮಶಾಸನ ಕ್ರಮವೆಂತೆಂದಡೆ ನಮಗೆ ಸಲುವ ಮಾಳೇನಹಳ್ಳಿ
5 ಯ ಸೀಮೆಯೊಳಗಣ ಕೊಟ್ಟವೆಂಬ ಗ್ರಾಮವನು ಶ್ರೀಜಯಂತೀ ಪುಣ್ಯಕಾಲದ
6 ಲು ಕೋಟಪುರದ ತಿರುಮಲದೇವರಿಗೆ ಸಹಿರಣ್ಯೋದಕ ದಾನ ಧಾರಾಪೂರ್ವ್ವ
7 ಕವಾಗಿ ತಮ್ಮ ಸ್ತ್ರೀಪುತ್ರದಾಯಾದಾದ್ಯನುಮತದಿಂದ ಸಮರ್ಪಿಸಿದ ಕುಮುದ್ವತೀ ತೀರದ
8 ಕೊಟ್ಟವೆಂಬಗ್ರಾಮದ ಪ್ರತಿನಾಮ ತಿರುಮಲಪುರದ ಧರ್ಮ್ಮಸಸನಯಿದಕಾರು
9 ತಪ್ಪಿದರೆ ತಮ್ಮತಾಯಿತಂದೆಯ ಕೊಂದಪಾಪಕ್ಕೆ ಹೋಹರು
10 ಸ್ವದತ್ತಾಂಪರದತ್ತಾಂವಾಯೋಹರೇತವಸುಂಧರಾಂ ಷಷ್ಠಿವರ್ಷಸಹಸ್ರಾಣಿ
11 ವಿಷ್ಟಾಯಾಂ ಜಾಯತೇಕ್ರಿಮಿಃ। ಸ್ವದತ್ತಾದ್ವಿಗುಣಂ ಪುಣ್ಯಂ ಪರ ದತ್ತಾನುಪಾಲನಂ
12 ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂಭವೇತ್ ಏಕೈವಭಗಿನೀ ಲೋಕೇಸರ್ವೇ
13 ಷಾಮೇವ ಭೂಭುಜಾಂ ನಭೋಜ್ಯಾ ನಕರಗ್ರಾಹ್ಯಾ ವಿಪ್ರದತ್ತಾವ ಸುಂಧರಾ ಇ
14 ಪರ ಗ್ರಾಮಕ್ಕೆ ಆರು ತಪ್ಪಿದರೆ ತಾಯಿತಂದೆ ವಾರಾಣಾಸಿಯಲಿಕೊಂ
15 ದವರು ಗೋಬ್ರಾಹ್ಮಣರ ವಧೆಮಾಡಿದವರು ಗುರುತಲ್ಪಮಾಡಿದವರು
16 ಯಿಧರ್ಮ್ಮಕ್ಕೆ ಶರಣ ಮಂಗಳ ಮಹಾ ಶ್ರೀಶ್ರೀಶ್ರೀ

## 130

ಅದೇ ಕಸಬಾ ಹೋಬಳಿ. ಹರಡಿಹಳ್ಳಿ ಫಾರೆಸ್ಟಿನಲ್ಲಿ ಸಂಗಮೇಶ್ವರ ದೇವಾಲಯದಬಳಿ ನಟ್ಟ ಕಲ್ಲು.

ಪ್ರಮಾಣ 4′–6″×2′–9″

1 ಸ್ವಸ್ತಿ ಶ್ರೀ ವಿಜಯಾಭ್ಯು
2 ದಯ ಶಾಲಿವಾಹನ
3 ಶಖ ವರುಷ ೧೬೬ ೬ಕ್ಕೆ
4 ಸಲುವ ಮನ್ಮಥನಾ
5 ಮ ಸಂವತ್ಸರದ ಜ್ಯೇಷ್ಠ
6 ಶುಥ ೧೪ ಸೋಮವಾರದ
7 ಲು ಶ್ರೀ ಹಿರಿಮಠದ ಕಲ್ಲೇದೇವರು
8 ತೇಜ ಸಿಂಗಪ ಕೂಡಿ ಸಂಗ
9 ಮನಂಜುಂಡೇಶ್ವ
10 ರನ ಪ್ರತಿಷ್ಠೆ
11 ಮಾಡಿಸಿದರು

## 131

ಅದೇ ಕಸಬಾ ಹೋಬಳಿ ಹಿತ್ತಿಲಗ್ರಾಮದ ಊರಬಾಗಿಲಲ್ಲಿ ನಟ್ಟ ವೀರಗಲ್ಲು.

ಪ್ರಮಾಣ ′5—6″×3—′9″

1 ಸ್ವಸ್ತಿ ಶ್ರೀಮತು ಚಾಳುಕ್ಯ ಚಕ್ರವರ್ತಿ ಸೋಮೇಶ್ವರ ದೇವರ········
2 ············ಸಲುತ್ತಮಿರೆ··········ಹೆತ್ತಿಳದ············
3 ········································
4 ಮಾದಯ್ಯನ ಅಳಿಯ ಗಂಡರಡಾವಣಿ ಸೂರೆಯ
5 ನಾಯಕಂ················ತುಱುವಂಮುಗು··············
6 ಪಲರಂ ಕೊನ್ದು ತಳ್ತಿಱಿದುಸುರಗಣಿಕೆಯರೊಳ್ ಕೂಡಿದಂ············
7 ·········································
8 ·········································

## 132

ಅದೇ ಹಿತ್ತಿಲಗ್ರಾಮದ ಕೆರೆಯ ಕಟ್ಟೆಗೆ ಉತ್ತರ ಗದ್ದೆಯ ಒದುವಿನಮೇಲೆ ನಟ್ಟಕಲ್ಲು.

1 ಸ್ವಸ್ತಿ ಸಮಸ್ತಭುವನಾಶ್ರಯ······ಪರಮೇಶ್ವರ ಪರಮಭಟ್ಟಾರಕ ಸತ್ಯಾಶ್ರಯ ಕುಳ
2 ತಿಳಕ ಚಾಳುಕ್ಯಾಭರಣ ಶ್ರೀಮತ್ತ್ರೈಳೋಕ್ಯ ಮಲ್ಲದೇವರ ವಿಜಯರಾಜ್ಯ ಮುತ್ತರೋತ್ತರಾಭಿವೃದ್ಧಿ
3 ············ಸಲುತ್ತಮಿರೆ ಸಕವರ್ಷ ೯೮೩ನೆಯ·····················
4 ····ಸಾಹಣಿಯೆನಿಸಿನೆಗಟ್ದ····ಗಂಜಾಕಬ್ಬೆಗಂ·· ಬಮ್ಮಂದೇವನ ಸನ್ತತಿಯ····ಆಜಕ್ಕಯ್ಯ
5 ············ಹೆತ್ತಿಳವಂಂದೇಡರು ಪಲರನಿಱಿದುತುಱುವಂ ಕೊಂಡಲ್ಲ ಶ್ರೀಮ
6 ················ಚಟ್ಟಂಪೋಗಿ ಆ ಹೆತ್ತಿಳದತುಱುವಂ······
7 ················ಸುರಲೋಕಪ್ರಾಪಿತನಾದ ············
8 ············ಮ್ರ್ಯತೇನಾಪಿಸುರಾಂಗನಾ ಕ್ಷಣ ವಿಧ್ವಂಸನೇಕಾಯೇ
9 ········ಸ್ವಸ್ತಿ ನಾಗಾಚಾರಿಯದೇವ······ಬರೆದರ್ಸ್ವ······:
10 ···········ಲೋಕೆಜನ ಕಂಡರಣಿವಂಂಗಳವಹಾ ಶ್ರೀ

## 133

ಅದೇ ಹಿತ್ತಲಗ್ರಾಮಕ್ಕೆ ಪೂರ್ವದಲ್ಲಿ ರಂಗನಾಥದೇವರ ಮಾನ್ಯದ ಗದ್ದೆಯಲ್ಲಿ ಬಿದ್ದಿರುವ ಕಲ್ಲು.

ಪ್ರಮಾಣ 3′–0″×2″–3″

1 ಸ್ವಸ್ತಿ ಸಮಸ್ತಭುವನಾಶ್ರಯಂ ಶ್ರೀ ಪೃಥಿವೀವಲ್ಲಭ ಮಹಾ.
2 ರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ಸತ್ಯಾಶ್ರಯ
3 ಕುಳತಿಳಕ ಚಾಳುಕ್ಯಾಭರಣ ಶ್ರೀಮತ್ತ್ರಿಭುವನ ಮಲ್ಲ
4 ದೇವರ ವಿಜಯರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ದ್ಧ
5 ಮಾನ ಮಾಚಂದ್ರಾರ್ಕ್ಕತಾರಂಬರಂ ಸಲುತ್ತುಮಿರೆ ತತ್ಪಾದ ಪದ್ಮೋಪಜೀವಿ
6 ············ಸಕವರ್ಷ ೧೦೩೪ನೆಯ ನನ್ದನ ಸಂವತ್ಸರದ
7 ವೈಶಾಖ ಸು ೧೧ ಬ್ರಿಹವಾರದನ್ದು ಸ್ವಸ್ತಿಯಮ
8 ನಿಯಮ ಸ್ವಾಧ್ಯಾಯಧ್ಯಾನಧಾರಣ ಮೌನಾನುಷ್ಠಾನ
9 ಜಪಸಮಾಧಿ ಶೀಲಗುಣಸಂಪನ್ನರಪ್ಪ ಶ್ರೀಮದ
10 ನಾದಿಯಗ್ರಹಾರವಹ ಹಿತ್ತಿಳದಸಾಯಿರಮುಂ

11 ಕ್ರಯದಾನವಾಗಿ ಕೊಂಡುಬಿಟ್ಟ ಧರ್ಮ್ಮ ಶ್ರೀಮತು ಸೋಮೇ
12 ಶ್ವರ ದೇವರ್ಗ್ಗೆ ನೈವೇದ್ಯಕ್ಕೆ ಬಿಟ್ಟಗದ್ದೆ ಜಾಕಿಯೂರ ಬಯಲೊಳ
13 ಗೆ ಹಂನೆರಡು ಮಾರುಗಳೆಯ ಲಯ್ದುಕಡಹವೂರ
14 ......೫೦ ಆ ಚಂದ್ರತಾರಂ ಸಲುತ್ತಮಿರ್ಕ್ಕ
15 ಈ ಧರ್ಮ್ಮಮನಾವನೋರ್ವ್ವಂ ಪ್ರತಿಪಾಳಿಸಿದಾತಂಗೆವಾರಣಾಸಿ
16 ಕಾಶಿ ಪ್ರಯಾಗೆಯಲ್ಲಿ ಸಾಯಿರಕವಿಲೆಗುಂ ಸಾಯಿರ
17 ವೇದಪಾರಗರಪ್ಪ ಬ್ರಾಹ್ಮಣರ್ಗ್ಗೆ ಕೊಟ್ಟ ಫಳಮಕ್ಕು
18 ಇದನಳಿದಾತಂ ವಾರಣಾಸಿ ಕುರುಕ್ಷೇತ್ರ ಪ್ರಯಾಗೆಯಲ್ಲಿ
19 ಸಾವಿರ ಕವಿಲೆಯಂ ಹತ್ತುಸಾಸಿರ ವೇದಪಾರಗರಪ್ಪ
20 ಬ್ರಾಹ್ಮಣರನಳಿದಮಹಾಪಾತಕನಕ್ಕು ಸ್ವದತ್ತಾಂಪರದತ್ತಾಂವಾ
21 ಯೋಹರೇತ ವಸುಂಧರಾಂ। ಷಷ್ಠಿರ್ವರ್ಷಸಹಸ್ರಾಣಿ
22 ವಿಷ್ಠಾಯಾಂಜಾಯತೇ ಕ್ರಿಮಿಃ

## 134

ಅದೇ ಹಿತ್ತಿಲಗ್ರಾಮಕ್ಕೆ ದಕ್ಷಿಣ ಶಾನುಭೋಗ ಮಂಜಪ್ಪನವರ ಗದ್ದೆಯಲ್ಲಿ

ಪ್ರಮಾಣ 2″–0″×1′–6″

1 ಸ್ವಸ್ತಿ ಶಕವರುಶ ೧೨೩೧ನೆ
2 ಯ ಸೌಮ್ಯ ಸಂವತ್ಸರದ ವೈಶಾ
3 ಖ ಬ ೧೪ ಮಂ ಲು ಹೊಂನವೂರಾ
4 ಕಲಿನಾಥ ದೇವರಹಳಿಯ ರಾ
5 ಮನಾಯಕರು ಕಲಿನಾಥದೇವರ
6 ನಿತ್ಯನೈವೇದ್ಯಕ್ಕೆಂದು ಕೊಟ್ಟದು
7 ಕೆಱೆಯ ಕೆಳಗೆ ಗದ್ದೆಯರಡು ಖಂ ಯಿ
8 ದನಾರೊಬ್ಬರೂ.............
9 ........ಕ್ಕೆ ಮಂಗಳಮಹಾ ಶ್ರೀ

## 135

ಅದೇ ಹಿತ್ತಿಲಗ್ರಾಮದ ಕೆರೆಯಕೆಳಗೆ ವೀರಪ್ಪನಗದ್ದೆಯಲ್ಲಿ ಬಿದ್ದಿರುವ ಕಲ್ಲು.

ಪ್ರಮಾಣ2″–6″×2″–6″

1 ಸ್ವಸ್ತಿ ಸಮಸ್ತಭುವನಾಶ್ರಯಂ ಶ್ರೀ ಪೃಥ್ವೀವಲ್ಲಭಂ ಮಹಾರಾಜಾ
2 ಧಿ ರಾಜಂ ಪರಮೇಸ್ವರಂ ಪರಮಭಟ್ಟಾರಕಂ ಸತ್ಯಾಶ್ರಯ ಕು
3 ಳತಿಳಕಂ ಚಾಳುಕ್ಯಾಭರಣಂ ಶ್ರೀಮತ್ರಿಭುವನಮಲ್ಲ ಹೆ
4 ರ್ಮಾಡಿದೇವರಸರ ವಿಜಯರಾಜ್ಯ ಮುತ್ತರೋತ್ತರಾಭಿವೃದ್ಧಿ ಪ್ರವ
5 ರ್ದ್ಧಮಾನ ಮಾಚಂದ್ರಾರ್ಕ್ಕತಾರಂಬರಂ ಸಲುತ್ತುಮಿರೆ ಸಕವರ್ಷ
6 ೧೦೪೩ನೆಯ ಶೋಭಕೃತು ಸಂವತ್ಸರದ ಪುಷ್ಯ ಸು ೧ ದಂದು ಸ್ವಸ್ತಿ ಶ್ರೀ ಮ
7 ದನಾದಿ ಯಗ್ರಹಾರಂ ಹೆತ್ತಿಳದ ಮಾದರ್ಸರು ಕೂಡೂರ
8 ಯರಕೊಟ್ಟಯ್ಯನು.........ದೇವಯ......
9 ಲು ಹಿತ್ತಿಲದ ಯ್ಯೆನೂರ್ವ್ವರ್ದ್ದೇವರ್ಗ್ಗೆನೈವೇದ್ಯಕ್ಕೆ ಬಿಟ್ಟ
10 ರಾವನೋರ್ವ್ವ ಪ್ರತಿಪಾಳಿಸಿದಾತಂಗೆ ಗಂಗೆ ವಾರಣಾಸಿ
11 ಕುರುಕ್ಷೇತ್ರದೊಳ್ ವೇದಪಾರಗರಪ್ಪ ಬ್ರಾಹ್ಮಣರ್ಗ್ಗೆ ಸಾಯಿರ ಕವಿಲೆ
12 ಯುಮಂ ಕೊಟ್ಟ ಧರ್ಮ್ಮ ಸ್ವದತ್ತಾಂಪರದತ್ತಾಂ ವಾ ಯೋ
13 ಹರೇತ ವಸುಂಧರಾಂ ಷಷ್ಠಿರ್ವರ್ಷ ಸಹಸ್ರಾಣಿ ವಿಷ್ಠಾಯಾಂ
14 ಜಾಯತೇಕ್ರಿಮಿಃ

## 136

ಅದೇ ಶಿಕಾರಿಪುರ ಕಸಬಾ ಹೋಬಳಿ ಗುತ್ತನಹಳ್ಳಿ ಗ್ರಾಮಕ್ಕೆಸೇರಿದ ಕಾನಿನಲ್ಲಿ ಪಾಳುದೇವಾಲಯದ ಬಳಿ ಬಿದ್ದಿರುವ ವೀರಗಲ್ಲು.

1 ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರ........
2 ಬನವಾಸಿ ಪುರವರಾಧೀಶ್ವರಂ ಜಯಂತೀ ಮಧುಕೇಸ್ವರ..........
3 ............ ಸತ್ಯರಾಧೇಯ............
4 ............ಶ್ರೀಮತು ವೀರರಾಮದೇವರಸರು........
5 ............೧೧೮೦ನೆಯ ಪಿಂಗಳ ಸಂವತ್ಸರದ ಶ್ರಾವಣ.......
6 ............ದಣ್ನಾಯಕ ........ಗವುಣ್ಡನ ಮೇಲೆ....

7 ಋವಂಕೊಂಡು ಪೆಂಡಿರುಡೆ ಯುಚ್ಚಲು ಬಿಲ್ಲಂಕಕಾಱಪುರುಷ ನಾರಾಯಣ ಪರಬಳಸಾಧಕ ಉ
8 ಲು ಘಟ್ಟದ ರಾಮಗವುಂಡಂ ತಳ್ತಿಱಿದು ತುಱುವಂ ಮಗುಳ್ಚಿ ಸುರಲೋಕ ಪ್ರಾಪ್ತನಾದ ಅದೆಂತೆಂ
9 ದಡೆ ಪೊಳೆವ ಸಿಡಿಲಂತೆ ಜವನಂತಳವಡಿಸುವ ಕಾಲಮ್ರಿತ್ಯು ಪೆಂಬಂತೊಡರ್ದ
10 ಸಿ ಪೊಯ್ದು ನಾಗಳು ಗಿರಿಗೌಡ ರಾಮಗವುಡಂಘಲರಂ ಸುರಿದರು ಪೂವಿನ ಸರಿಮಳೆಸುರ
11 ದುಂದುಭಿ ಯೊಡನೆ ಶಂಖಕಹಳಾರವಮುಂ ಬೆರಸು ಸುರಾಂಗನೆಯರ್ಪಿರಿಯನೆಂದು ರಾಮ
12 ಗವುಡನಂ ದಿವಗುಯ್ದರು ಜಿತೇನ ಲಭ್ಯತೇ ಲಕ್ಷ್ಮೀರ್ಮ್ರಿತೇನಾಪಿ ಸುರಾಂಗನಾ ಕ್ಷಣ ವಿಧ್ವಂಸನೇ ಕಾ
13 ಯೇ ಕಾಚಿಂತಾಮರಣೇರಣೇ ಓಂ ನಮಶ್ಶಿವಾಯ

## 137

ಬೆಳಂದೂರು ಹೋಬಳಿ ಮುಡಬಗ್ರಾಮಕ್ಕೆ ಸೇರಿದ ಫಾರೆಸ್ಟಿನಲ್ಲಿ ಪಾಳುಭಾವಿ ಬಳಿ ಬಿದ್ದಿರುವ ತುಂಡುಕಲ್ಲು.

(ಎರಡು ಕಡೆಯಲ್ಲೂ ಹೋಗಿದೆ).

1 .........ಹೋಗ್ರಕುಲತಿಲಕಂ ನಯಪ್ರತಾಪ ಸಾ
2 ....ಯ್ಯು ತ್ತು ಮಿರೆ ಒಳೆಯಪೆರ್ಮ್ಮಾಡಿಯರ್ಸರ್ನ್ನ
3 ನುಚಿತಾಚಾರ ನನ್ಯಾಯವರ್ಜ್ಜಿತನಟಿಪಿಲ್ಲ
4 ......ಸ್ವಸ್ತಿ ಸಕನೃಪ ಕಾಲಾತೀತಂ ವತ್ಸರಜ್ಗಳ್......
5 ಱೆಯುಮಂ ಕಟ್ಟಿಸಿ ದೇಗುಲಮಂ ಮಾಡಿಸಿ ಯಿಟ್ಟಪ್ಪುಡಿ
6 ಕೊಟ್ಟುದು ಯಿದಂ ಕಾದೋಜ್ಗಸ್ವಮೇಧದಫಲ

## 138

ಅದೇ ಹೋಬಳಿ ಹೋತನಕಟ್ಟೆ ಗ್ರಾಮಕ್ಕೆಸೇರಿದ ಫಾರೆಸ್ಟ್‌ನಲ್ಲಿ ಯಲ್ಲಪ್ಪನ ಗದ್ದೆಯಲ್ಲಿ ನಟ್ಟಕಲ್ಲು.

ಪ್ರಮಾಣ 3′-0′×1″-6″

1 ಸ್ವಸ್ತಿ ಶ್ರೀ ಅಮ್ರುತನಾಥ ದೇವರ ಬ್ರಾಹ್ಮರುಗ
2 ಳು ಸಂದಿಗೇರಿ ರಾಮಣ್ಣಂಗೆ ಸರ್ಬ್ಬಬಾ
3 ಧಾ ಪರಿಹಾರವಾಗಿ ಹತ್ತು ಕಂಬಗದ್ದೆಯನು
4 ಸಲಸುವರು ಶ್ರೀ ಶ್ರೀ ಶ್ರೀ

## 139

ಅದೇ ಬೆಳಂದೂರು ಹೋಬಳಿಸಂಡಗ್ರಾಮದಬಳಿ ನಂದೀಕೋಲು ಬಸವಣ್ಣನ ಕಂಬದಲ್ಲಿ.

ಪ್ರಮಾಣ 5′—6″×1′—0″

1 ಶ್ರೀ ನಮಸ್ತುಂಗ ಶಿರಶ್ಚುಂಬಿ
2 ಚಂದ್ರಚಾಮರಚಾರ
3 ವೇ ತ್ರೈಲೋಕ್ಯ ನಗರಾರಂಭ
4 ಮೂಲಸ್ತಂಭಾಯ ಸಂಭವೇ
5 ಸ್ವಸ್ತಿಶ್ರೀ ಜಯಾಭ್ಯುದಯ
6 ದ ಶಕ ವರುಷ ೧೨೬೮ನೆಯ ಪ
7 ರಾಭವ ಸಂವತ್ಸರದ ಕಾರ್ತಿಕ ಸು
8 ದ ೩ ಬುಧಾನೂರಾಧೆಯಲ ಸ್ವಸ್ತಿ
9 ಶ್ರೀಮನು ಮಹಾಮಂಡಳೇಶ್ವರ
10 ಅರಿರಾಯವಿಭಾಡ ಭಾಷೆಗೆ ತಪ್ಪುವ
11 ರಾಯರಗಂಡ ಶ್ರೀ ವೀರಬುಕ್ಕಣ್ಣ ವೊ
12 ಡೆಯರ ಕುಮಾರ ವಿರುಪಂಣ ವೊಡೆ
13 ಯರು ಹಂಪೆಯ ಶ್ರೀ ವಿರೂಪಾಕ್ಷ ದೇ
14 ವರಿಗೆ ಅಂಗಭೋಗ ರಂಗಭೋಗ ಅಮ್ರುತಪಡಿ
15 ಗೆ ಸಲುವಳಿಗೆ ನಾಡಬಳಗಣ ಸಂಡವೆಂ
16 ಬ ಗ್ರಾಮವನು ಪುರವಾಗಿ ಆಚಂದ್ರಾರ್ಕ್ಕ
17 ಸ್ಥಾಯಿಯಾಗಿ ಕೊಟ್ಟದು ಈ ಧರ್ಮ್ಮಕ್ಕೆ ಮ
18 ಆರು ಅಳುಪಿದೊಡೀ
19 ವಾರಣಾಸಿಯ
20 ಲ ಸಾವಿರ ಕವಿಲ
21 ಸಾವಿರ ಬ್ರಾಹ್ಮಣರ
22 ಕೊಂದ ಪಾಪದ
23 ಲಿ ಹೋಹರು ಶ್ರೀ
24 ಸ್ವದತ್ತಾಂ ಪರದತ್ತಾಂ
25 ವಾಯೋಹರೇತ
26 ವಸುಂಧರಾಂ ಷಷ್ಟಿ
27 ವರುಶ ಸಹಸ್ರಾಣಿ
28 ವಿಷ್ಟಾಯಾಂಜಾಯ
29 ತೇಕ್ರಿಮಿಃ

## 140

ಅದೇ ಸಂಡಗ್ರಾಮದ ಕೆರೆಯ ಕಟ್ಟೆಯಮೇಲೆ ನೆಟ್ಟಕಲ್ಲು.

ಪ್ರಮಾಣ 3'—6"×2'—9"

1 ಸಕವರಿಷ ೧೩೨೧ನೆಯ ಪೌಷ್ಯ ಸಂವತ್ಸರದ ಮಾರ್ಗ್ಗಸಿರ ಬ ೧ ಲು ಶ್ರೀಮತು ಆಯುಮರಾಯದೇವರ ಮನೆಯ
2 ಆಳಿಯ ಬಮುಯಗೌಡರ ಕಲದೇವನಮಗ ಚಿಕ್ಕಬೊಮ್ಮ ಸ್ವರ್ಗಸ್ಥನಾದ ನಾತನವಲ್ಲಭೆ ಬೀರಬೆ ಕಲುನಿಲಿಸಿದ ಪ್ರತಿಷ್ಟೆ.

## 141

ಅದೇ ಸಂಡಗ್ರಾಮದಬಳಿ ಬೂದಿಗದ್ದೆ ಸರ್ವೇ ನಂಬರು 15ರಲ್ಲಿ ನೆಟ್ಟಕಲ್ಲು.

1 ತಾರಣಸಂವಥ
2 ರದ ಆಸ್ವೀಜ ಶು ೩
3 ಜಯದಶಮಿಯ
4 ಲು ಶಿವರುದ್ರ ದೇ
5 ವರಿಗೆ ರಾಯನಾಯ
6 ಕರು ಕೊಟ್ಟಭೂಮಿ
7 ....ನಾಡಿಗೆ ಸಲುವ
8 ಸಂಡದ ಕೆರೆಯು
9 ಕೆಳಗೆ......ಬಳ್ಳಿ
10 ಕೊಟ್ಟರು ಇದು
11 ಆಚಂದ್ರತಾರಕ
12 ಬರುವುದೆಂದು ಕೊ
13 ಟ್ಟ ಶಿರಾಸಾಸನ ಇ
14 ದಕೆ ತಪ್ಪಿದವರ
15 ತಾಯಿತಂದೆಕೊಂದ
16 ವರು........

## 142

ಅದೇ ಗ್ರಾಮದ ಊರಬಾಗಿಲಬಳಿ ನೆಟ್ಟಕಲ್ಲು.

1 ನಂದನ ಸಂವತ್ಸರದ
2 ಚೈಯಿತ್ರ ಸು ೩ ಲು ಸಂ
3 ಡದಮರೆಟಿ ಕದ ಗ
4 ಉಡರವಮಗ ಚಿಕ್ಕ
5 ಮಲೆಗೌಡರು ಸ್ವ
6 ರ್ಗಸ್ತರಾದನು [ರು]

## 143

ಅದೇ ಬೆಳಂದೂರು ಹೋಬಳಿ ಬನ್ನೂರು ಗ್ರಾಮಕ್ಕೆಸೇರಿದ ಬೂದಿಬಸವನ ಗುಡ್ಡದಲ್ಲಿ ಹೊಂಗೆಮರದಕೆಳಗೆ ಬಿದ್ದಿರುವ ಕಲ್ಲು.

ಪ್ರಮಾಣ 4'-6"×2'-0"

1 ಶುಭಮಸ್ತು ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ
2 ಚಾರವೇ ತ್ರಯಿಲೋಕ್ಯ ನಗರಾರಂಭ ಮೂಲಸ್ತಂ
3 ಭಾಯ ಶಂಭವೇ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾ
4 ಹನ ಶಕವರುಷ ೧೪೭೩ನೇ ಪ್ರಜೋತ್ಪತ್ತಿ ಸಂವತ್ಸರದ
5 ಶ್ರಾವಣ ಶು ೫ ಲು ಶ್ರೀಮನ್ಮಹಾರಾಜಾಧಿರಾಜ ರಾಜ ಪರ
6 ಮೇಶ್ವರ ಶ್ರೀ ವೀರಪ್ರತಾಪ ಸದಾಶಿವದೇವ ಮಹಾರಾಯ
7 ರು ಸುಖಸಂಕಥಾವಿನೋದದಿಂ ರತ್ನಸಿಂಹಾಸನಾರೂಢ ರಾ
8 ಗಿ ಪೃಥಿವೀ ರಾಜ್ಯಂಗೆಯ್ಯುತ್ತಿರಲು ಅರರುದ್ರಕವಳದ ವೊ
9 ಳಗಣ ಬನ್ನೂರ ಗ್ರಾಮಿಗಳು ಸಂಕಣ್ಣನಾಯಕರು ನಮಗೆ ಸಮ್ಮ
10 ತನಾದ ಧರ್ಮಾಚಿಪಂಡಿತರ ತೇಜಪುರದ ಗಿರಿಯಪ್ಪಯ್ಯ
11 ನವರ ಮಕ್ಕಳು ಮಾರಪ್ಪಯ್ಯಗೆ ಕೊಟ್ಟ ಸ್ಥಳದ ಉಂಬಳಿ ಚುಂ
12 ಗಡಿಯು ಛತ್ರ ಬ ೨ ಸಾಲೂರ ಸ್ಥಳದ ಉಂಬಳಿ ಚುಂಗಡಿಯಿಂ
13 ದ ಮದಗದ ಗದ್ದೆಗೆ ಸಲುವ ಅಷ್ಟಭೋಗ ತೇಜಸ್ವಾಮ್ಯ
14 ವನುಸಹ ನೀವು ಪುತ್ರಪಉತ್ರ ಪಾರಂಪರೆಯಾ
15 ಗಿ ಆಚಂದ್ರಾರ್ಕಸ್ಥಾಯಿಯಾಗಿ ಸುಖದಿಂ ಅನುಭ
16 ವಿಸಿಕೊಂಡು ಬರಲುಳವರು ಯೆಂದು ಕೊಟ್ಟ ಸ್ಥಳದ
17 ಶಿರಾಶಾಸನ (रामाजीपंत)
18 ಸ್ವದತ್ತಾದ್ವಿಗುಣಂ ಪುಣ್ಯಂ ಪರದತ್ತಾನು
19 ಪಾಲನಂ ಪರದತ್ತಾಪಹಾರೇಣ ಸ್ವದತ್ತಂ
20 ನಿಷ್ಫಲಂಭವೇತ್ ॥ ಶ್ರೀ ಶ್ರೀ ಶ್ರೀ

## 144

ಅದೆ ಬನ್ನೂರು ಗ್ರಾಮಕ್ಕೆಸೇರಿದ ಬಾವಿಬಸವಣ್ಣದೇವರ ಗುಡಿಯಬಳಿ ನಿಲ್ಲಿಸಿದ ಕಲ್ಲು.

ಪ್ರಮಾಣ 3'-0"×1'-6"

1 ಸ್ವಸ್ತಿಶ್ರೀ ಬಲ್ಲಮರ
2 ಕುಮಾರಸಾಬ್ಬ................
3 ಅರಸುಗೆಯುಗೆ ಬಲ್ಲನಾಡಹ......
4 ಬನ್ನಿಯೂರ ಸಾಸಿರ್ವ್ವರೊಳು

5 ಕುಣ್ಣ ಗುಡಿ ಅಸಗ ಗೊ
6 ಸನಿಸುರರೊಳೆ ಕೂಡೆ
7 ಗೊಸಸಿಯ ತಮ್ಮಂ ಕಲ್ಲ
8 ನಿಱಿಸಿದೊನಾ
9 ಚನ್ದ್ರತಾರಕಂ
10 ನಿಲಕೆ

## 145

ಬೆಳಂದೂರು ಹೋಬಳಿ ಸಾಲೂರುಗ್ರಾಮದ ಈಶ್ವರದೇವಾಲಯದ ಮುಂದೆ ನಟ್ಟ ವೀರಗಲ್ಲು.

ಪ್ರಮಾಣ 4′–3″×2′–6″

1 ಸ್ವಸ್ತಿಶ್ರೀಮಚ್ಚಾಳುಕ್ಯ ವಿಕ್ರಮಕಾಳದ ೧೩ನೆಯ ಸುಕ್ಲಸಂವತ್ಸ
2 ರದ ಫಾಲ್ಗುಣ ಸುದ್ಧ ಅಮಾವಾಸ್ಯೆಯನ್ನು ಸಾಲಿಯೂ
3 ರ ಹೊರಿಗಳನಿಱಿದು ತುಱುವ ಕೊಣ್ಡು ಹೆಂಡಿರ ಪುಡೆವಚ್ಚುವಲ್ಲಿ
4 ಕುಱುಂಬಬೀರಯ್ಯಂಗಂಬಳೆಯಬ್ಬೆಗಂ ಪುಟ್ಟಿದ ಓಜೆಗವುಣ್ಡಂ
5 ತುಱುವ ಮಗುಳ್ಚಿಪಲರಂಕೊನ್ದು ಬೀರಲೋಕ ಪ್ರಾಪಿತನಾದ

## 146

ಅದೇ ಸಾಲೂರುಗ್ರಾಮದ ಈಶ್ವರದೇವಾಲಯದ ಮುಂದೆ ನಟ್ಟಕಲ್ಲು.

ಪ್ರಮಾಣ 2′–6″×1′–3″

1 ಶ್ರೀಮತ್ಪರಮಗಂಭೀರಸ್ಯಾದ್ವಾದಾ
2 ಮೋಘಲಾಂಛನಂ । ....................................
3 ......................................ಶಾಸನಂ ಜಿನಶಾ
4 ಸನಂಶ್ರೀ....................................ಚಂದ್ರನಾಥದೇವ
5 ರ ಗುಡ್ಡಿನಾದೊವ್ವೆಯ...................
6 .........ನಾಗಯ್ಯಂಗಳು ನಿಲ
7 ಸಿದ ಕಲ್ಲು ಸಾಲಿಯೂರ
8 .........ಮಹಾಜನಂ...............
9 .................................................

## 147

ಅದೇ ಸಾಲೂರುಗ್ರಾಮದ ಈಶ್ವರದೇವಾಲಯದಮುಂದೆ 1ನೆಯ ಶಾಸನದ ಕಲ್ಲು.

ಪ್ರಮಾಣ 4′—3″×2′—6″

1 .........ಮಸ್ತ ಭುವನಾಶ್ರಯ ಶ್ರೀ ಪ್ರಿಥ್ವೀವಲ್ಲಭಮಹಾರಾ.............
2 .........ಪರಮೇಶ್ವರ ಪರಮಭಟ್ಟಾರಕ ಸತ್ಯಾಶ್ರಯ ಕುಳತಿಳಕ
3 ಚಾಳುಕ್ಯಾಭರಣಂ ಶ್ರೀಮತ್ತ್ರಿಭುವನ ಮಲ್ಲದೇವರ ವಿಜ
4 ಯ ರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ದ್ಧಮಾನಮಾಚಂದ್ರಾ
5 ರ್ಕ್ಕ ತಾರಂಬರಂ ಸಲುತ್ತಮಿರೆ ಶ್ರೀ ಚಾಳುಕ್ಯ ವಿಕ್ರಮವರ್ಷ
6 ....ನೆಯ ಮನ್ಮಥಸಂವತ್ಸರ ಪುಷ್ಯ ಸುದ್ಧ ೧೧ ಸುಕ್ರವಾರ ದನ್ದು
7 ....ಮದನಾದಿಯಗ್ರಹಾರಂ ಸಾಲವೂರಸಾಸಿರ್ವ್ವರು
8 ....ವ ಕುಬೇಶ್ವರದೇವರ ಗರ್ಬ್ಭಗೃಹದ ಸಾಮ್ಯಮಂ ಮಧ್ಯಕ......
9 ....ವಿತರ್ಗ್ಗೆಮುನ್ನಂ ಸಕಾರುಣ್ಯಂಗೆಯ್ದು ಕೊಟ್ಟರು ಅವರ ಮ......
10 ಮಾರ ಕಬ್ಬೆಯ ಮಕ್ಕಳ್ ವಿಶ್ವಾಮಿತ್ರ ಗೋತ್ರದ ಬಿಯ........
11 ....ಹಿತಾಗ್ನಿಗಳ ಮಮ್ಮಂಬೀಯಮಯ್ಯಂಗಂ ಮಾರಬ್ಬೆಗಂ ಪುಟ್ಟಿ
12 ಕೇಶವಯ್ಯನುಂ ಅವರಿಂ ಕಿಱಿಯ ಬಿಟ್ಟಮಯ್ಯದೇವರ ಪಾ
13 ದ ಸಿರೆಯುಂ ಕಟ್ಟಿಸಿ ಗರ್ಬ್ಭಗೃಹಮಂಮಾಡಿಸಿದರು ಮ
14 ತ್ತಂಬಿಯಣ ಬಿಟ್ಟಮಯ್ಯಂಗಮವನ ಧರ್ಮಪತ್ನಿ ಜನ್ನಂಬೆಗಂಪು
15 ....ದ ಮಕ್ಕಳ್ ಚಿಕ್ಕಣ ಮೈಸಾಸಿಯವರಿಂ ಕಿಱಿಯ ಶಂಕರ......
16 ....ತನವನಿಂ ಕಿಱಿಯ ವಾಮನ ಅವನಿಂ ಕಿಱಿಯ ಚಿಕ್ಕಯ್ಯನು
17 ಮತ್ತಂ ಕಸವಯ್ಯನ ಮಕ್ಕಳು ಸೋಮಂಣದೇವರ್ ಅವರಿಂ ಕಿಱಿಯಂ
18 ....ಪುತ್ರಃಕುಳದೀಪಕನೆನಿಸಿನೆಗಟ್ಟ...........ಕುವಳಯ
19 ....ಡಿದ ವಾಶಾಂಬರಮನೆಯ್ದೆ............ದಿಟಂ ಸಭೆಯೊಳ್
20 ....ತಿಳಕ....ಜ ಭಕ್ತಸಾಲವೂರಜೀಯ........ವಿನಯನಿಧಾನ।
21 ....ತಿಳಕಂ ವಿಪ್ರವಂಸ ಚೂಡಾರತ್ನಂ ಜನವಿನುತವಿಭು ಬೀಮಯ್ಯನಂ
22 ನಿಪ ಸಾಲವೂರ......ಇನ್ತೆನಿಸಿದ ಬೀಡಯ್ಯನಿಂ ಕಿಱಿಯ ಬಿ

23 ಟ್ಟಿ ಮಯ್ಯನು ಮತ್ತಂ ಬಿಟ್ಟಿಮಯ್ಯಂಗಮವರ ಧರ್ಮಪತ್ನಿ ಬಿಚ್ಚವ್ವೆಗಂ ಪುಟ್ಟಿದ ಮಕ್ಕ
24 ..........ಕೇಸವಯ್ಯಬಿಟ್ಟಿ........ಇಂತಿವರನ್ವಯದಿಂ ಕುಲಕ್ರಮದಿಂಧರ್ಮ್ಮಮಂಬಿ
25 ........ಯ........ಚ........ಬೀರಂಣಜ್ಜಿ........ಗಾಗಿ........
26 ........ಬಿಟ್ಟಿಮಯ್ಯಂ ತಾವು ಕಟ್ಟಿಸಿದ ಕೆಱೆಯ
27 ........ಗಣ ಕೋಡಿಯಲ್ಲಿ ಪೂರೊಳಗೆ ತಮ್ಮ ಭಕ್ತಿ
28 ........ಗುಣಿಗನ ಮತ್ತರೊಂದು ಈ ಧರ್ಮ್ಮಮಂ ಸಾಸಿರ್ವ್ವರು ತಮ್ಮ ತಮ್ಮ
29 ........ಪ್ರತಿಪಾಳಿಸಿದರ್ಗ್ಗೆ ವಾರಣಾಸಿಯ ಸಾಸಿರ ಕವಿಲೆಯು
30 ........ ॥ ಇದನಳಿದಾತ ಕವಿಲೆಯನಳಿದ ಪಾತಕನಕ್ಕು

## 148

### ಅದೇ ಸಾಲೂರುಗ್ರಾಮದ ಈಶ್ವರದೇವಾಲಯದಬಳಿ ನಟ್ಟ 2ನೆಯ ಶಾಸನ.

ಪ್ರಮಾಣ 3′-6″×2′-3″

1 ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ ತ್ರೈಲೋ
2 ಕ್ಯ ನಗರಾರಂಭ ಮೂಲಸ್ತಂಭಾಯಶಂಭವೇ
3 ಸ್ವಸ್ತಿಶ್ರೀಮಚ್ಚಾಳುಕ್ಯ ವಿಕ್ರಮವರ್ಷ........ನೆರಡ
4 ನೆಯ ಪಿಂಗಳ ಸಂವತ್ಸರದಮಾವಾಸ್ಯೆ ಸೋಮವಾರದಂ
5 ದು ಅನಾದ್ಯಘ್ರಾರಂ ಸಾಲಯೂರ ಶೇಷಸಾಸಿರ್ವ್ವರು ಮಹಾಜನಂಗಳು
6 ತಮ್ಮ ಗ್ರಾಮ ಸ್ವಾರ್ಥವಾಗಿ ವಶಿಷ್ಟಗೋತ್ರದಯಂ ಪಿಲಿಯ ಬಾಸಿವೆಯ್ಯನ ಮ
7 ಗೆ ರಾಮಯ್ಯನ ಬ್ರಾಹ್ಮಣಿ ಚವುಡಬ್ಬೆಗಂ ಪುಟ್ಟಿದ ಬೇಡ ಪಂತಲ ಭೀಮ
8 ಯ್ಯನ ಮಾದಿಮಯ್ಯನ ಕಯ್ಯಲು ಕೊಂಡು ಕಾಲಂ ಕ
9 ಚ್ಚಿಧಾರಾಪೂರ್ವಕಂಮಾಡಿ ಪ್ಯೆರೆದೇವರ ನೈವೇದ್ಯಕ್ಕೆ ಬಿಟ್ಟ ಧ
10 ರ್ಮ್ಮದ ಭೂಮಿ ಬಂನುರದ ಅಯಗೌಂಡಗೆಱೆಯ ಹೊರೆಯ
11 ಲು ಗುಣಿಗನ ಮತ್ತರೊಂದು ಪುರಾಣಕ್ಕೆ ಗುಣಿಗನ ಮತ್ತ
12 ರೊಂದು ಯಲ್ಲಪದೇವರ ಮತ್ತರೊಂದು ಇನ್ತು ಬಿ
13 ಟ್ಟ ಧರ್ಮ್ಮಭೂಮಿಯುಂ ಸಾಸಿರ್ವ್ವರು ಪ್ರತಿಪಾಳಿಸುವರು ಯವರ್ಗ್ಗೆ
14 ಗಂಗಾತೀರದಲ್ಲಿ ಪ್ರಯಾಗೆಯಲ್ಲಿ ವಾರಣಾಸಿಯಲು ಸಾಸಿರ ಬ್ರಾಹ್ಮ
15 ಣರುವಂ ಸಾಸಿರ ಕವಿಲೆಯುಮಂ ರಕ್ಷಿಸಿದ ಫಲವಕ್ಕು
16 ಯಿನ್ತೀ ಧರ್ಮ್ಮಮ ನಾವನಾನುಃವೊಬ್ಬೆನಡೆದವನಾತೀರದಲ್ಲಿ ಸಾಸಿರ್ವ
17 ಬ್ರಾಹ್ಮಣರುವ ಸಾಸಿರ ಕವಿಲೆಯುಮಕೊಂದ ಮಹಾಪಾತಕನ
18 ಕ್ಕು । ಸ್ವದತ್ತಾಂ ಪರದತ್ತಾಂ ವಾ ಯೋಹರೇತ ವಸುಂಧರಾಂ ಷಷ್ಠಿ ವ
19 ರ್ಷ ಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ
20 ಸಾಮಾನ್ಯೋಯಂ ಧರ್ಮ್ಮಸೇತುರ್ನ್ನೃಪಾಣಾಂ ಕಾಲೇ
21 ಕಾಲೇ ಪಾಲನೀಯೋ ಭವದ್ಭಿಃ ಸರ್ವ್ವಾನೇತಾನ್ಭಾವಿನಃ
22 ಪಾರ್ತ್ಥಿವೇಂದ್ರಃ ಭೂಯೋಭೂಯೋ ಯಾಚತೇರಾಮಚಂದ್ರಃ । ಶ್ರೀ

## 149

### ಅದೇ ಸಾಲೂರು ಗ್ರಾಮಕ್ಕೆ ಸೇರಿದ ಚವುಡಿ ಗುಡಿಯಬಳಿ ಬಿದ್ದಿರುವ ಕಂಬದಲ್ಲಿ.

ಪ್ರಮಾಣ 4′—0″×1′—0″

1 ಸ್ವಸ್ತಿಶ್ರೀ ಸಾನ್ತರ ಅಜವ
2 ರ್ಮ್ಮರಸರಊರ್ಸಾಸಿರ್ಗ್ಗೆಪಾಲದಳನಿ

3 ತ್ತೋದು ಇದು ಅಚನ್ದ್ರತಾರಮ್

## 150

### ಅದೇ ಸಾಲೂರುಗ್ರಾಮದ ಕೆರೆಯಕೆಳಗೆ ಶಾನಭೋಗರ ಗದ್ದೆಯಲ್ಲಿ ನಟ್ಟಕಲ್ಲು.

ಪ್ರಮಾಣ 4′—0″×2′—0″

1 ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ । ತ್ರೈಲೋಕ್ಯ ನ
2 ಗರಾರಂಭ ಮೂಲಸ್ತಂಭಾಯಶಂಭವೇ ಸ್ವಸ್ತಿ ಸಮಸ್ತ ಭು
3 ವನಾಶ್ರಯ ಶ್ರೀ ಪ್ರಿಥುವೀವಲ್ಲಭ ಮಹಾರಾಜಾಧಿರಾಜ ಪ
4 ರಮೇಶ್ವರ ಪರಮಭಟ್ಟಾರಕ ಸತ್ಯಾಶ್ರಯ ಕುಳತಿಳಕ ಚಾಳು
5 ಕ್ಯಾಭರಣ ಶ್ರೀಮತ್ರಿಭುವನ ಮಲ್ಲದೇವರ ವಿಜಯ
6 ರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ದ್ಧಮಾನಮಾಚಂ
7 ದ್ರಾರ್ಕ್ಕತಾರಂಬರಂ ಸಲುತ್ತುಮಿರೆ....ಸ್ವಸ್ತಿಯಮನಿಯಮ ಸ್ವಾ

8 ಧ್ಯಾಯಧ್ಯಾನಧಾರಣ ಮೌನಾನುಷ್ಠಾನ
9 ಜಪಸಮಾಧಿ ಶೀಲಗುಣಸಂಪನ್ನರುಂ
10 ಸುಪ್ರಸನ್ನರುಂ ಕವಿಗಮಕವಾದಿವಾಗ್ಮಿಗಳ್
11 ....ಕುಳಾಗಮವೇದಿಗಳುಂ ನಿಜಕೀರ್ತ್ತಿಮದಾ
12 ....ಧವಳಿತದಿಗಂತರಾಳರುಂ ಶರಣಾಗತ ವ
13 ಜ್ರಪ್ರಾಕಾರರುಮೆನಿಸಿ ಶ್ರೀ ಮದನಾದಿಯಗ್ರ
14 ಹಾರಂ ಸಾಲವೂರ ಸಾಸಿರ್ವರ್ಗೆ ಕಾರುಣ್ಯಂಗೆಯ್ದು
15 ಕೇಶವಾಹಿತಾಗ್ನಿಗಳ್ ತಮ್ಮದೊಂದು ಭಕ್ತಿ......
16 ಧರ್ಮ್ಮಮಂಮಾಳ್ಪ ನುಕೂಳದಿಂಸಾಸಿ
17 ರ್ವರ್ಗ್ಗೆ ಪಾದಪೂಜೆಯುಂಕೊಟ್ಟು ಸ್ವಸ್ತಿ
18 ಶ್ರೀಮಚ್ಚಾಳುಕ್ಯ ವಿಕ್ರಮಕಾಲದ ೩೯
19 ನೆಯ ಜಯಸಂವತ್ಸರದ ವೈಶಾಖದ ಮಾ
20 ವಾಸ್ಯೆ ಬೃಹಸ್ಪತಿ ವಾರದಂದು ಭಟ್ಟಮಹಾ
21 ಜನ ಮೂವತ್ತಿರ್ಛಾಸಿರಕ್ಕೆ ಚಾತುರ್ಮಾಸ್ಯದ ಕಳ್ಪ
22 ದಕ್ಕೆ ಸರ್ಬ್ಬನಮಸ್ಯವಾಗಿ ಕಿಕ್ಕೆಯಕೆಳಗೆ ಗದ್ದೆ
23 ಬಿಟ್ಟ....ಗುಣಿಗನಮತ್ತಲೆರಡಿಂತೀಧರ್ಮ್ಮಮಂ ಪ್ರತಿಪಾ
24 ಳಿಸುವುದಿಂತೀ ಧರ್ಮ್ಮಮಂ ಪ್ರತಿಪಾಳಿಸಿದನಾತಂಗೆ ಕುರು
25 ಕ್ಷೇತ್ರ ಪ್ರಯಾಗೆಯುಗ್ರ್ಘತೀರ್ತ್ಥದೊಳ್ ಸಹಸ್ರ ಕವಿ
26 ಲೆಯಂ ಕೋಡುಂ ಕೊಳಗುಮಂ ಪಂಚರತ್ನದಿಂ ಕಟ್ಟಿಸಿ ಸಹ
27 ಸ್ರ ವೇದಪಾರಗರಪ್ಪ ಬ್ರಾಹ್ಮಣರ್ಗ್ಗೆಗೊಟ್ಟ ಫಳ ಮ.........
28 .........ಧರ್ಮ್ಮಮನಳಿದನಾಪುಣ್ಯಕ್ಷೇತ್ರದೊಳಗಿಂತು....
29 ಕವಿಲೆಯುಮನನಿಬರ್ವ್ವೇದಪಾರಗರು ಮನಳಿದ
30 ಪಾತಕನಕ್ಕುಂ ಸ್ವದತ್ತಾಂ ಪರದತ್ತಾಂ ವಾಯೋಹರೇತ ವ
31 ಸುಂಧರಾಂ ಷಷ್ಟಿರ್ವರ್ಷ ಸಹಶ್ರಾಣಿ ವಿಷ್ಟಾಯಾಂ
32 ಜಾಯತೇ ಕ್ರಿಮಿಃ

## 151

ಅದೇ ಸಾಲೂರು ಗ್ರಾಮದ ನಾಡಿಗರ ಗದ್ದೆಯಲ್ಲಿ ಬಿದ್ದಿರುವ ಕಲ್ಲು.

ಪ್ರಮಾಣ 5′—0″×1′—6″

1 ಸ್ವಸ್ತ್ಯಮೋಘವರ್ಷ ದೇವರ ವಿ
2 ......ಯುತಿರೆ ಸಕವರ್ಷ ೭೯೨ನೆಯ
3 ರದ ಮಾಘಬ ೫ ಆದಿತ್ಯವಾರದನ್ದು
4 ಯಮಸ್ವಾಧ್ಯಾಯ ಧ್ಯಾನಧಾರಣ ಮೌನಾ
5 ರಣ ಜಪಸಮಾಧಿ ಶೀಲಸಂಪನ್ನರಪ್ಪ
6 ದನೇಕ ತರ್ಕ್ಕ ಶಾಸ್ತ್ರಕುಲವೇಧ ಪಾರಗರಪ್ಪ — ಒಡೆದು ಹೋಗಿದೆ. (lines 4–10)
7 ಹಾರಸಾಲವೂರ ಸ್ವಸ್ತಿ ಶ್ರೀಮದಗ್ರಹಾರ
8 ಖೆಯ ಅಂಗೀರಸಗೋತ್ರದ ವೂರೊಡೆಯಮಾದ
9 ಸ್ಯವಾದಪೂಜೆಯುಂ ಕೊಟ್ಟುಪುಳಿಸಯು
10 ಭೋಜನ ಅತಿಥಿ ಅಭ್ಯಾಗತರ್ವ್ವರಸಿ ಧರ್ಮಕ್ಕೆಬಿಟ್ಟ
11 ಡಗೆಜೆಯ ಬಯಲೊಳಗೆ ಗುಣಿಗನ ಮತ್ತಲು
12 ಆ ಭೋಜನದ ಪರಿಕಾರ ಮೆನ್ತೆನ್ದಡೆ ಆರುಮಾನ ಅಕ್ಕಿ
13 ಮಾನ ತುಪ್ಪ ಒಂದುಮಾನ ಮಂದರು ಇನ್ತಿಪರಿಕಾರದಿಂದ ಮಾ
14 ಬಹುಳ ಅಪ್ಪವಿಯಿಂದು ಸಾಸಿರ್ವ್ವರಧ್ಯಕ್ಷದಿಂ — ಮುಮು
15 ........ ..ಗೌತಮಗೋತ್ರದ ತತ್ಪುತ್ರಸ್ವದಾರರತಿ
16 ನಿರತನಪ್ಪ ಮಾದಿಮಯ್ಯನ ವಂಶದವರು ನಾಲ್ಕದಕೆ ಮತ್ತ
17 ....ಬ್ಯಾಳ ಸಹಿತ ಕುಡಿಸಿ ಅಲ್ಲ ಪುಟ್ಟಿದ
18 ....ಯಿಂದುಪಜೀವಿಸುವರು ಮತ್ತಮಲ್ಲಿ .... ಪಡಿಯು
19 ಪೊನ್ನಂ ನೆರಪೀ ತಮ್ಮ ಮನೆಯಿಂ ಪಂಚಕೇಶ್ವರಮಂಪೊರಮಡಿ
20 ಸಿ ಓಡಿಸಿ ಆಯುತ್ತರ್ಥಮಂ ಪೂಜಿಸುವರು । ಇನ್ತೀ ಧರ್ಮ್ಮಮಂ ಪ್ರ
21 ತಿಪಾಳಿಸಿದವರು ವಾರಣಾಸಿ ಕುರುಕ್ಷೇತ್ರಪ್ರಯಾಗೆ ಯಗ್ರ್ಘತೀ
22 ರ್ತ್ಥ ಮೊದಲಾದ ಕ್ಷೇತ್ರಂಗಳೊಳ್ ಸಾಸಿರ ಕವಿಲೆಯುಮಂ
23 ಕೋಡುಂ ಕೊಳಗುಮಂ ಪಂಚರತ್ನದಿಂ ಕಟ್ಟಿಸಿ ವೇದಪಾರಗ
24 ರಗ್ನಿಹೋತ್ರಿಗಳ್ಗೆ ಉಭಯಮುಖಿಯಂ ಕೊಟ್ಟ ಪುಣ್ಯ

25 ..........................................................

26 ..........................................................

27 ......ಸಾಮಾನ್ಯೋಯಂ ಧರ್ಮ್ಮಸೇತುರ್ನ್ನೃಪಾಣಾಂ
ಕಾಲೇ ಕಾಲೇ

28 ಪಾಲನೀಯೋಭವದ್ಭಿಃ ಸರ್ವ್ವಾನೇತಾನ್ಭಾವಿನಃ ಪಾರ್ತ್ಥಿ

29 ವೇಂದ್ರಾನ್ ಭೂಯೋ ಭೂಯೋ ಯಾಚತೇರಾಮಚಂದ್ರಃ

30 .........ಹರೇತ ವಸುಂಧರಾಂ ಷಷ್ಟಿರ್ವರ್ಷ

31 ......... ಜಾಯತೇಕ್ರಿಮಿಃ

## 152

ಅದೇ ಬೇಲಂದೂರು ಹೋಬಳಿ ಕಲ್ಲುಮನೆ ಗ್ರಾಮಕ್ಕೆ ಸೇರಿದ ಕೆರೆಯ ಅಂಗಳದಲ್ಲಿ ಬಿದ್ದಿರುವ ಕಲ್ಲುಕಂಬ

1 ಸ್ವಸ್ತಿಶ್ರೀಮತು ವೀರಬಲ್ಲಾಳ ದೇವವರ್ಷದ ೧೧ನೆಯ ಪೈಂಗಳೆ

2 ............... ಸೋಮವಾರದಂದು ಶ್ರೀಮತು

3 ..........................................................

4 ......... ಮಂನೆಯಸುಂಕ ವೆಗ್ಗಡೆ ಮಾರಯ್ಯ ...........

5 ......... ದೇವರ ನಂದ ದೀವಿಗೆ ತಿಂಗಳಿಂಗೆ ..............

6 ......... ತಮ್ಮ ಹೆರ್ಜುಂಕದ ಸೇನಬೋವ

7 ......... ಮಂನೆಯದಲ್ಲಿ ಹಾ

8 ......... ಅಂತುತಿಂಗಳಿಂಗೆ ಈಪ್ಪಣ

9 ......... ಚಾರ್ಯ್ಯ ಮಧುಕೇಸ್ವರ ಪಂಡಿತರ್ಗ್ಗೆ ಧಾರಾಪೂರ್ವಕಂ ಮಾಡಿಬಿಟ್ಟರು.

## 153

ಉಡುಗಣಿಹೋಬಳಿ ಉಡುಗಣಿಗ್ರಾಮಕ್ಕೆ ಪೂರ್ವ ಮಲುಕಸಾಬರ ಗದ್ದೆಯಲ್ಲಿ ಬಿದ್ದಿರುವ ಕಲ್ಲು.

ಪ್ರಮಾಣ 4′—0″×1′—9″

1 ಶುಭಮಸ್ತು ಯುವಸಂವತ್ಸರದ ಆಶಾಡ ಬ ೧೪ ಲು ಶ್ರೀ
2 ಮತ್ಕೆಳದಿ ಚೆಂನಬಸಪ್ಪ ನಾಯಕರು ವೀರಂಣಗೆ ಬರೆಸಿ
3 ಕಳುಹಿದಕಾರ್ಯ ಉಡುಗಣಿಕೋಟೆ ಊಳಿಗದ ಕೈ
4 ಸೋಡಿ ಬಸವನು ಹುಜುರುಬಂದು ಉಡುಗಣಿ ಪೇಠೆ
5 ಉಕ್ಕಡದ ಬಳಿಯಲ್ಲಿ ತಾನು ಚನ್ನಪ್ಪನಾಯಕರವರು
6 ಕೊಡಿಸಿದ ಸ್ವಾಸ್ತಿಯ ಕ್ರಮವೆಂತೆಂದರೆ ಮಲ್ಲಾಪುರದ ಗ್ರಾ
7 ಮದ ನಿವೇಶನವ ಉತ್ತಾರವಕೊಟ್ಟು ಯೀ ಭೂಮಿ ಮ •
8 ಠದ ಡಉ ಮೂರೆಗೆ ಶಿಲಾಸ್ತಾಪಿತವ ಮಾಡಿಸಿಕೊಟ್ಟು ನಮ
9 ಗೆ ನಿರೂಪಕೆ ಅಪ್ಪಣೆಯಾಗಬೇಕೆಂದು ಹೇಳಿಕೊಂಡ ಸಂಬಂಧ
10 ಯಿದರ ಕ್ರಯಗ ೧೫‖☰ ಹದಿನಯಿದು ವರಹ ಎಂ
11 ಟುಹೊಂನು ಮೂರು ವೀಸವಂನು ಆರಮನೆಗೆ ತೆಗೆದು
12 ಕೊಂಡು ಉಡುಗಣಿ ಸೀಮೆ ಮಲ್ಲಾಪು
13 ರದ ಗ್ರಾಮದಿಂದ ನಿಲ್ಲಿಸಿದ ನಷ್ಟದಿಂದ
14 ಗ ೩ ಯೀ ಬಗ್ಯೆ ಕೂಡಿದಾಸೋಹದ ಸಿಸ್ತು
15 ಲ್☰ ಉಭಯಂಗ ೩☰ ಮೂರು
16 ವರಹಾನು ಮೂರು ವೀಸದ ಭೂಮಿಯನು
17 ಉಡುಗಣಿಕೋಟೆ ಊಳಿಗದ ಕೈಸೋಡಿ
18 ಬಸವನು ಉಡುಗಣಿಪೇಠೆ ಉಕ್ಕಡ
19 ದ ಬಳಿಯಲು ಕಟ್ಟಿಡವನು ಕಟ್ಟಿದ ಆಯಕಟ್ಟಿನ
20 ವಿರಕ್ತಮಟಕೆ ಶಿವಾರ್ಪಿತವಾಗಿ ಉ
21 ತ್ತಾರವಕೊಟ್ಟು ಯೀ ಭೂಮಿಗೆ ಲಿಂಗಮು
22 ದ್ರಾಶಿಲಾಸ್ತಾಪಿತವ ಮಾಡಿಸುವವರೆಗೆ ಹುಜು
23 ರಿಂದ ಊಳಿಗದ ಭದ್ರನ ಕಳುಹಿಸಿ
24 ಥೇವೆಚ ಉಗ್ರಾಮದವರ ಕರಸಿಕೊಂಡು
25 ಗಡಿ ತಾತ್ಸಾರಬಾರದರೀತಿ ಯಿವನಮುಂದಿಟ್ಟು
26 ರೇಬ ಪ್ರಮಾಣು ನಿಲಸಿದ ನಷ್ಟದ ಭೂಮಿ ಮಠದ
27 ಡಉ ಮೂರೆಗೆ ನೀವು ಶಿಲಾಸ್ತಾಪಿತವ ಮಾಡಿ
28 ಸಿಕೊಟ್ಟು ಯೀ ಕಾಗದ ಸೇನಬೋವರ ಕಡಿತಕ್ಕೆ

29 ಬರಿಸಿ ತಿರಿಗಿ ಯವನ ವಶಕ್ಕೆ ಕೊಡುವರಾ
30 ಗಿ ಯೆಂದು ಸಜ ನಿರೂಪಪ್ರತಿ ಶ್ರೀ ಶ್ರೀ

## 154

ಅದೇ ಉಡುಗಣಿಯಲ್ಲಿ ರಾಘವೇಂದ್ರಾಚಾರ್ಯರ ಮನೆಯಲ್ಲಿಸಿಕ್ಕಿದ ತಾಮ್ರಶಾಸನ ಪ್ರತಿ.

1 ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ ತ್ರೈರೋಕ್ಯನಗರಾ
2 ರಂಭ ಮೂಲಸ್ತಂಭಾಯ ಶಂಭವೇ ಸ್ವಸ್ತಿಶ್ರೀ ಜಯಾಭ್ಯುದಯ
3 ಶಾಲಿವಾಹನ ಶಕವರುಷ ೧೫೬೭ನೆಯ ಚಿತ್ರಭಾನು ಸಂವತ್ಸರದ
4 ಶ್ರಾವಣ ಶುದ್ಧ ೩ಲೂ ಶ್ರೀಮತು ಸಜನ ಶುದ್ಧ ಶಿವಾಚಾರಸಂಪನ್ನ ದ್ಯಾ
5 ವಾ ಪೃಥ್ವೀ ಮಹಾಮಹತ್ತಿಗೊಳಗಾದ ಚೆಂನಬಸಪ್ಪದೇವರಮಠಕೆ
6 ಯೆಡವ ಮುರಾರಿ ಕೋಟೆ ಕೋಳಾಹಳವಿಶುದ್ಧ ವೈದಿಕಾದ್ವೈತಸಿದ್ಧಾಂತ
7 ಪ್ರತಿಷ್ಠಾಪಕ ಶಿವಗುರುಭಕ್ತಿಪರಾಯಣರಾದ ಕೆಳದೀ ವೆಂಕಟ
8 ಪ್ಪ ನಾಯಕರ ಪೌತ್ರರಾದ ಭದ್ರಪ್ಪನಾಯಕರ ಪುತ್ರರಾದ ವೀರಭ
9 ದ್ರ ನಾಯಕರೂ ಶಿವಾರ್ಪಿತವಾಗಿ ಕೊಟ್ಟದಾನ ತಾಂಬ್ರಶಾಸನ ಕ್ರ
10 ಮ ವೆಂತೆಂದರೆ ಪುರಾಣದ ಮಾದಯ್ಯಗಳ ಮಕ್ಕಳು ಮಹದೇ
11 ವಗಳ ಕಯ್ಯ ಅರಮನೆಗೆ ತತ್ಕಾರೋಚಿತ ದ್ರವ್ಯದಿಂಕೊಂಡು
12 ಶಿವಾರ್ಪಿತವಾಗಿ ಬಿಟ್ಟ ಸ್ವಾಸ್ತೆ ವಿವರ ಉಡುಗಣಿಸೀಮೆವೊಳಗಣ
13 ಮಾವಿನ ಹಾಳುಗ್ರಾಮ ೧ಕೆ ರೆಖೆಗ ೬೦ ಅರುವತ್ತುವರಹಾನ
14 ಭೂಮಿಯನೂ ಶಿವಾರ್ಪಿತವಾಗಿ ಬಿಟ್ಟೆವಾಗಿ ಆ ಗ್ರಾಮಕ್ಕೆ ಹಾಕಿದ
15 ಗಡಿಕಲ್ಲಿನಿಂದ ವೊಳಗಾದ ಭೂಮಿಗೆ ಸಲುವ ಅಷ್ಟಭೋಗ
16 ತೇಜ ಸ್ವಾಮ್ಯವನೂ ಪ್ರಾಕುಮರ್ಯಾದೆಯಲ್ಲಿ ಆಗುಮಾ
17 ಡಿಕೊಂಡು ಮಠದ ಧರ್ಮವನೂ ಸಾಂಗವಾಗಿ ನಡಸಿಕೊಂಡು ಬ
18 ರುವುದೆಂದು ಬರಸಿಕೊಟ್ಟ ತಾಮ್ರಶಾಸನ । ಸ್ವದತ್ತಾಂ ಪರದತ್ತಾಂ
19 ವಾ ಯೋಹರೇತ ವಸುಂಧರಾಂ ಷಷ್ಟಿವರ್ಷಸಹಸ್ರಾಣಿ ವಿಷ್ಠಾ
20 ಯಾಂಜಾಯತೇ ಕ್ರಿಮಿಃ ದಾನಪಾಲನಯೋರ್ಮಧ್ಯೇ ದಾನಾಚ್ಛ್ರೇ
21 ಯೋನು ಪಾಲನಂ ದಾನಾತ್ ಸ್ವರ್ಗಮವಾಪ್ನೋತಿ ಪಾಲನಾದ
22 ಚ್ಯುತಂ ಪದಂ ಶ್ರೀವೆಂಕಟಾ ಶ್ರೀ ಶ್ರೀ

## 155

ಅದೇ ಉಡುಗಣಿ ಕಸಬೆಯಲ್ಲಿ ಹಾವೇರಿ ರಾಮಾಚಾರ್ಯರ ಮನೆಯಲ್ಲಿಸಿಕ್ಕಿದ ವೋಲೆಗರಿಯಲ್ಲಿ ಒರೆದ ತಾಮ್ರ ಶಾಸನದ ಪ್ರತಿ.

1 ಶ್ರೀ ಗಣಾಧಿಪತಯೇನಮಃ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾ
2 ಮರಚಾರವೇ ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ ॥
3 ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರುಷ ೧೨೬೮
4 ನೆಯ ನಳಸಂವತ್ಸರದ ಮಾಘ ಸು ೧ ಆದಿತ್ಯವಾರದಲು ಶ್ರೀಮನ್ಮ
5 ಹಾಮಂಡಳೇಶ್ವರ ಅರಿರಾಯ ವಿಭಾಡ ಭಾಷೆಗೆ ತಪ್ಪುವ ರಾಯ
6 ರಗಂಡ ಶ್ರೀ ವೀರಬುಕ್ಕರಾಯರ ಕುಮಾರ ವಿರುಪಂಣೊಡೆಯ
7 ರು ಸುಖಸಂಕಥಾವಿನೋದದಿಂ ಪೃತಿವೀರಾಜ್ಯವನಾಳುವಲ್ಲಿ
8 ಶ್ರೀಮತು ಉಡುಗಣಿನಾಡು ಸೀಮೆವೊಳಗಾದ ಸಮಸ್ತನಾಡ
9 ಪ್ರಭುಗಳು ಆಶ್ವಲಾಯನ ಸೂತ್ರದ ರುಕ್ಶಾಖೆಯ ಕೌಸಿಕ
10 ಗೋತ್ರದ ಮಹದೇವಭಟ್ಟರ ಮಕ್ಕಳುಪ್ಪಿಗೋವಿಂದಭಟ್ಟರು ಅ
11 ವರ ತಮ್ಮ ರೇವಣಭಟ್ಟರುಗಳಿಗೆ ಕೊಟ್ಟ ದಾನಶಾಸನ ಕ್ರಮ
12 ವೆಂತೆಂದರೆ ನಂಮ ನಾಡವೊಳಗಣ ನಂದಿಹಳ್ಳಿಗ್ರಾಮಕೆ
13 ಸಲುವ ಚತುಸ್ಸೀಮೆವೊಳಗಣ ಗದ್ದೆ ಬೆದ್ದಲು ತೋಟ ತುಡಿಕೆ
14 ನಿಧಿ ನಿಕ್ಷೇಪ ಜಲತರುಪಾಷಾಣ ಅಕ್ಷೀಣ ಆಗಾಮಿ ಸಿದ್ಧ ಸಾಧ್ಯ
15 ಅಷ್ಟಭೋಗತೇಜಸ್ವಾಂಮ್ಯ ಮುಂತಾಗಿ ಯೇನುಳ್ಳದನೂ ತಂಮ್ಮ
16 ಪಿತೃಗಳಿಗೆ ಪುಣ್ಯಲೋಕವಾಗಬೇಕೆಂದು ಸೂರ್ಯೋಪರಾಗಪುಂ
17 ಣ್ಯ ಕಾಲದಲು ಶಿವಾರ್ಪಣವಾಗಿ ಮಾಡಿ ತಂಮೊಳು ಸರ್ವೈಕ್ಯ
18 ಮತ್ಯವಾಗಿ ವೊಡಂಬಟ್ಟು ಧಾರಾಪೂರ್ವಕವಾಗಿ ಕೊಟ್ಟ ದಾನತಾಮ್ರ
19 ಶಾಸನ ಯಿ ಧರ್ಮ್ಮಕ್ಕೆ ಆರುಅಳುಪಿದವರು ವಿಶ್ವೇಶ್ವರಸನ್ನಿಧಿ
20 ಯಲು ಸಾವಿರ ಕವಿಲೆಯ ಕೊಂದಪಾಪ ತಮ್ಮ ಪಿತೃಗಳ ನರಕಕ್ಕೆ
21 ಯಿಕ್ಕಿದವರು ಏಕೈವಭಗಿನೀರೋಕೇಸರ್ವೇಷಾಮೇವಭೂ
22 ಭುಜಾಂ ನಭೋಜ್ಯಾನ ಕರಗ್ರಾಹ್ಯಾ ವಿಪ್ರದತ್ತಾವಸುಂಧರಾ ॥

23 ಸ್ವದತ್ತಾಂ ಪರದತ್ತಾಂ ವಾ ಯೋ ಹರೇತವಸುಂಧರಾಂ ಷಷ್ಟಿವರು
24 ಷ ಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ । ಆದಿತ್ಯ
25 ಚಂದ್ರಾವನಿಲೋನಳಶ್ಚ ದ್ಯಾರ್ಭೂಮಿರಾಪೋಹೃದಯಂ ಯಮ
26 ಶ್ಚ ಅಹಶ್ಚರಾತ್ರಿಶ್ಚ ಉಭೇಚಸಂಧ್ಯೇಧರ್ಮಶ್ಚ ಜಾನಾತಿ ನರಸ್ಯ
27 ವೃತ್ತಂ ॥ ಮಂಗಳಮಹಾ ಶ್ರೀ ಶ್ರೀ ಶ್ರೀ

## 156

ಅದೇ ಉಡಗಣಿಗ್ರಾಮಕ್ಕೆಸೇರಿದ ಮಲ್ಲಾಪುರದ ಮುರಡಬಸವಣ್ಣ ದೇವಾಲಯದ ಮುಂದೆ ನಟ್ಟ ವೀರಗಲ್ಲು.

ಪ್ರಮಾಣ 3′—6″×1′—9″

1 ಸ್ವಸ್ತಿಶ್ರೀ ಯಾದವ ಚಕ್ರವರ್ತಿ ವೀರಬಲ್ಲಾಳ
2 ದೇವರ ರಾಜ್ಯದಲು ...... ...........
3 ಶ್ರೀಮತು ಮಹದೇವದಂಣಾಯಕರು ಸಿಂಗದೇವನ ಮೇಲೆ
4 ಧಾಳಿನಡೆದಾಗ ಗಂಡರಗಂಡ ಬೀರಯ್ಯಂ ಪೋಗಿ ಪಲರ
5 ನಿಱಿದು ಸುರಗಣಿಕೆಯದೊಳ್ಕೂಡಿದನಾತನ ತಮ್ಮ ಕಾಳ
6 ಗವುಂಡಂ ಕಲ್ಲನಿಲಿಸಿದಂ ..............................
7 ಜಿತೇನಲಭ್ಯತೇ ಲಕ್ಷ್ಮೀರ್ಮೃತೇ ......................
8 ಕ್ಷಣವಿಧ್ವಂಸನೇ ಕಾಯೇಕಾಚಿಂತಾಮರಣೇರಣೇ..........

## 157

ಅದೇ ಉಡುಗಣಿಗ್ರಾಮಕ್ಕೆಸೇರಿದ ಮಲ್ಲಾಪುರದ ಮುರಡಬಸವಣ್ಣದೇವಾಲಯದ ಮುಂದೆ ನಾಗರಕಲ್ಲಿನಲ್ಲಿ.

1 ಅಂಗಿರಸ ಸಂವತ್ಸರದ ಶ್ರಾವಣ ಸದ್ದ
2 ಚಉತಿಯಲು ಯಲಪನಾಯಕನು
3 ನಿಲಿಸಿದ ನಾಗರಕಲ್ಲು ಶ್ರೀ

## 157a

ಅದೇ ಉಡುಗಣಿಗ್ರಾಮದ ಮಾರೀಗುಡಿಯಮುಂದೆ ನಟ್ಟ ನಾಗರಕಲ್ಲಿನಲ್ಲಿ.

1 ಶ್ರೀ ನಾಗೇಸ್ವರನಾ ಚೆಂಡಯ
2 ನಾಯಕಮಾಡಿದ ಕೆಲಸ ಶ್ರೀ

## 158

ಅದೇ ಉಡುಗಣಿಹೋಬಳಿ ಬಿಸ್ಸನಹಳ್ಳಿಗ್ರಾಮಕ್ಕೆಸೇರಿದ ಬಸವೇಶ್ವರ ದೇವಾಲಯದಬಳಿ ನಟ್ಟಕಲ್ಲು.

ಪ್ರಮಾಣ 3′—6″×1′—9″

1 ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ । ತ್ರೈಲೋಕ್ಯ
2 ನಗರಾರಂಭ ಮೂಲಸ್ತಂಭಾಯ ಶಂಭವೇ
3 ಸ್ವಸ್ತಿಶ್ರೀಮತ್ತ್ರಿಭುವನ ಮಲ್ಲದೇವ ವಿಜ
4 ಯ ರಾಜ್ಯ ಮುತ್ತರೋತ್ತರಾಭಿವೃದ್ಧಿ ಪ್ರವರ್ದ್ಧ
5 ಮಾನಮಾಚಂದ್ರಾರ್ಕ್ಕತಾರಂಬರಂ ಸಲುತ್ತುಮಿರೆ
6 ತತ್ಪಾದಪದ್ಮಾರಾಧಕಂನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ
7 ಶ್ರೀಮನ್ಮಹಾಪ್ರಧಾನಂ ಬಾಣಸುವೆರ್ಗ್ಗಡೆ ದಂಡನಾಯಕ ಅನ
8 ನ್ತ ಪಾಳರಸರ ಬೆಸದಿಂ ಸಮಸ್ತ ಪ್ರಸಸ್ತಿ ಸಹಿತಂ ಶ್ರೀ
9 ಮನು ವಡ್ಡರಾವುಳದ ದಂಡನಾಯಕಂ ಗೋವಿಂದರಸರು ಬನ
10 ವಾಸೆ ಪನ್ನಿರ್ಚ್ಛಾಸಿರಮುಮಂ ಸುಖಸಂಕಥಾವಿನೋದದಿಂ ರಾ
11 ಜ್ಯಂಗೆಯ್ಯುತ್ತುಮಿರೆ ॥ ಪರವಿದ್ಯಾನಿಧಿ ಕೇಸಿರಾಜ ವಿಭುಗಂ
12 ನೀಲಬ್ಬೆಗಂಪುಟ್ಟಿ ಭಾಸುರಕೀರ್ತಿ ಪ್ರಿಯನಾಗಿ ಸಂದಗು
13 ಣರತ್ನಂ ದಾಸಿರಾಜಂಪರಾಶರ ಗೋತ್ರಾಂಬರ ತಿಗ್ಮರೋಚಿಜನ
14 ಕಂತಾಯ್ಯಾರು ನಾನಾಗುಣಾಕರೆ ಸೋಮಾಂಬಿಕೆ ಎಂದೊಡೀ ಭುವನದೊ
15 ಳ್ ಗೋವಿಂದನೇಂಧನ್ಯನೋ ॥ ತತ್ಪಾದಪದ್ಮೋಪಜೀವಿ ಅನ್ತರ್ವೇದಿಯ
16 ಶ್ರೀರಾಮದತ್ತಿಯ ಅಷ್ಟಸಹಸ್ರ ಸಂಖ್ಯಾಗ ವೇಹಗ್ರಾಮಪು
17 —ವ್ವೇ ದೂರು ಮಾಧವಭಟ್ಟರು ತಂದೆ ತಾಯ್ ಜಾಹ್ನಕಿ ವತ್ಸ ಗೋತ್ರ ಗೌರಬ್ಬೆ
18 ಅನ್ತಾ ಸೊಡ್ಡಳನನುಜಂ ದಣ್ಣನಾಯಕ ಗೋವಿಂದರಸರ ಮಯ್ದುನ ಪ್ರ
19 ಥ್ವೀಧರತ್ರಿವಾಜಿ ಭಟ್ಟರು ಶ್ರೀಮನ್ಮಹಾವಡ್ಡಗ್ರಾಮಂತಾನೆ
20 ನಿಸಿದ ಕುಂದೂರಲು ಪೆರ್ಗ್ಗಡೆತನಂಗೆಯ್ಯುತ್ತುಮಿದ್ದುರ್ ಧರ್ಮ್ಮ ಪ್ರಸಂಗ
21 ದಿಂ ಕೆಱೆಯನಗಳಿಸಲು ಭೂಮಿಯುಂ ಕುಡಿವೆಂದು ಮೂವ

22 ತ್ರಿಚ್ಚಾರ್ಸಿರಕ್ಕಂ ಬಿನ್ನಪಂಗೆಯ್ಯೆ ಪ್ರಸನ್ನಚಿತ್ತರಾಗಿ ಊರಿಂ ಬಡಗಣ
23 ಹದಿಯ ಬಚ್ಚೆಯಲು ಭೂಮಿಯಂಕುಡ ಚಾಳುಕ್ಯ
24 ವಿಕ್ರಮಕಾಲದ ೩೨ ಡನೆಯ ಸರ್ವ್ವಜಿತು ಸಂವತ್ಸರದ ಚ
25 ಯಿತ್ರ ಸುದ್ದ ತದಿಗೆ ಬ್ರಹಸ್ಪತಿವಾರದಲು ಕೆಱೆಯನಗ
26 ಳಿಸಿ ದೇಗುಲಪಂ ಮಾಡಿಸಿ ಅಲ್ಲಿ ಪಂಡಗೆಯ ಅಂಬಲಿಗಂ ದೇವರ ನಿ
27 ವೇದ್ಯಕಂ ಪೂಜೆಗಂ ಓಜರಮಕ್ಕೆಯಲು ಕೆಱೆಯ ಕೆಳ
28 ಗೆ ಕಚ್ಚವಿಯಗಳೆಯಲು ಮಾಱುಗೊಂಡು ಬಿಟ್ಟ ಕಮ್ಮ ೫೦
29 ಮಹಾದೇವರ ಕಯ್ಯಲು ಆರವಗೆ ಮಾಱುಗೊಂಡು ಕಮ್ಮ
30 ೧೩ ಅನ್ತುಕಮ್ಮ ೬೩ ಕ್ಕಂ ಮೂವತ್ತಿಚ್ಚಾರ್ಸಿರಕಂ ಪಾದ
31 ಪೂಜೆಯಂಕೊಟ್ಟು ರುದ್ರೇಸ್ವರದ ಪಂಡಿತರ್ಗ್ಗೆ ಧಾರಾಪೂ
32 ರ್ವ್ವಕಂ ಮಾಡಿ ಕೊಟ್ಟರೀಧರ್ಮ್ಮಮಂ ಮೂವತ್ತಿಚ್ಚಾರ್ಸಿ
33 ರ ನಡೆಪ ಪೆರ್ಗ್ಗಡೆಗಳು ಪ್ರತಿಪಾಳಿಸುವರು
34 ಈ ಧರ್ಮ್ಮಮಂ ಪ್ರತಿಪಾಳಿಸಿದವರು ವಾರಣಾಸಿ ಕುರುಕ್ಷೇತ್ರದಲು
35 ಸಾಸಿರ್ವ್ವಬ್ರಾಹ್ಮಣರು ಮಸಾಸಿರ ಕವಿಲೆಯದಾನಂಗೆಯ್ದ ಫಲ

## 159

ಅದೇ ಬಿಸ್ಸಲಹಳ್ಳಿ ಸಂಗಯ್ಯನ ಗದ್ದೆಯಲ್ಲಿ ಬಿದ್ದಿರುವ ಕಲ್ಲು.

ಪ್ರಮಾಣ 4′—6″ × 2′—6″

1 ಸ್ವಸ್ತಿ ಕನ್ನರವಲ್ಲಹಂ ಪ್ರಿಥುವೀ ರಾಜ್ಯಂ
2 ಗೆಯ್ಯೆ ಅಯ್ಯೂರ ಬೀರ ಆನೆಗುನ್ದ............................
3 ..................ಕೂಡಿ..................ಕೋಟೆಯ ಆಣಿ..........
4 ಸಿ............................ಬಲ್ಲರು..................
5 ಕೊಟ್ಟಪೊ..........................ನಮು..................
6 ಳದಾ..............................................
7 ....................................ಬ..............
8 .................... ...........ಕಲ್ಲಂಕೃತ..................

## 160

ಅದೇ ಉಡುಗಣಿಹೋಬಳಿ ಬಸವನಂದಿಹಳ್ಳಿ ಗ್ರಾಮಕ್ಕೆ ಸೇರಿದ ಕಾಡಿನಲ್ಲಿ ಕೆಱೆಯ ಒಳಭಾಗದಲ್ಲಿ ನಟ್ಟಕಲ್ಲು.

ಪ್ರಮಾಣ 3′—6″ × 1′—6″

1 ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ ತ್ರೈ
2 ಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ‖
3 ಶ್ರೀಮತು ಭೂಲೋಕ ಮಲ್ಲದೇವವರ್ಷದ ೧೫ನೆಯ ರೌದ್ರಿ ಸಂವತ್ಸರದ ಫಾಲ್ಗು
4 ನ ಶುದ್ಧ ಪೌರ್ಣ್ನಮಃ ಬ್ರಿದಂದು ಶ್ರೀಸ್ವಸ್ತಿ ಯಮನಿಯಮ
5 ಸ್ವಾಧ್ಯಾಯ ಧ್ಯಾನಧಾರಣ ಮೌನಾನುಷ್ಠಾಣ ಜ
6 ಪಸಮಾಧಿ ಶೀಲಗುಣಸಂಪನ್ನರಪ್ಪ ಶ್ರೀ ಮದನಾದಿ
7 ಯಗ್ರಹಾರಂ ತಾಣಗುಂದೂರ ರಾಜಗುರು ಶಿವಶಕ್ತಿದೇವರ
8 ಕಾಲಂ ತೊಳೆದು ಧಾರಾಪೂರ್ವ್ವಕಂಮಾಡಿ ತಾವರೆ ಕೆಱೆಯ
9 ............ಗನಹಸ್ತದಲು ತೆವರಮೇರೆ ಆಲದ..................
10 ......................ಮರನ..............ಒಟ್ಟು ಅಪ್ಪುಗೆಯ ಗದ್ದೆಗಳೆ..........
11 ........................ಪೂಜೆಯಂಮಾಡಿ ಕೊಟ್ಟರು ಆವೋ..........
12 ಯಿನ್ನೀ ಧರ್ಮ್ಮಮಂ ನಾವನಾನುಂ ಪ್ರತಿಪಾಳಿಸಿದರ್ಸ್ಸಾಯಿರ
13 ಬ್ರಾಹ್ಮಣರ ಸಾಯಿರಕವಿಲೆಯಂಕೊಟ್ಟ ಫಲಮನೆಯ್ದು
14 ವರೀಧರ್ಮ್ಮಮಂ ಕಿಡಿಸಿದರ್ಸ್ಸಾಸಿರ ಕವಿಲೆಯು ಮಂ
15 ಸಾಸಿರ್ವ್ವರ್ವ್ವೇದಪಾಲಕರ ಕೊಂದ ಮಹಾಪಾತಕನಕ್ಕು
16 ಸ್ವದತ್ತಂ ಪರದತ್ತಂ ವಾಯೋಹರೇತ ವಸುಂಧರಾಂ ಷಷ್ಠಿ
17 ರ್ವ್ವರಿಸ ಸಹಸ್ರಾಣಿ ವಿಷ್ಟಾಯಾಂ ಜಾಯತೇ
18 ಕ್ರಿಮಿಃ । ಬಾಳೆಬರೆದ ಧರ್ಮ್ಮೋಜನಕೆಲಸ

## 161

ಅದೇ ಬಸವನಂದಿಹಳ್ಳಿಗೆ ಉತ್ತರಗುಡ್ಡದಮೇಲೆ ಹುಣಸೇಮರದ ಬುಡದಲ್ಲಿ ಬಿದ್ದಿರುವ ಕಲ್ಲು.

ಪ್ರಮಾಣ 3′—0″×1′—6″

1 ಸ್ವಸ್ತಿ ಜಯಾಭ್ಯುದಯ ಶಲ
2 ವಾಹನ ಶಕ ವರುಶ ೧೫೫೪ಳ
3 ನೆಯ ಪರಿಧಾವಿ ಸಂವತ್ಸರದ
4 ಆಶಾಢ ಶು ೧೦ಲು ಶ್ರೀಮತು
5 ಕೆಳದಿ ಶಿವಪ್ಪನಾಯಕರ
6 ಪುತ್ರರಾದ ಸೋಮಶೇಖರ
7 ನಾಯಕರ ಧರ್ಮಪತ್ನಿ
8 ಯರಾದ ಚೆಂನಂಮಾಜಿ
9 ಯವರು ಕಟಿಸಿದ ಮಂಟಪ ಧರ್ಮ ಶ್ರೀ

## 162

ಅದೇ ಉಡುಗಣಿಹೋಬಳಿ ಮುಳಕೊಪ್ಪದಬಳಿ ಕಾನಿನಲ್ಲಿ ಬಿದ್ದಿರುವ ಕಲ್ಲು.

ಪ್ರಮಾಣ 2′—6″×1′—6″

1 ಶಿವಾಯನಮಃ ಸ್ವಸ್ತಿ
2 ಶ್ರೀಮತು ಕಾಮದೇವವರಿ
3 ಶದ ೧೩ನೆಯ ಪ್ರ
4 ಮಾದಿ ಸಂವತ್ಸರ ಜ್ಯೈ
5 ತ್ರ ಬ ಅಮಾವಾಸೆ
6 ಸೋಮವಾರ ವ್ಯತೀ
7 ಪಾತದಂದು ಕಲ್ಲಗಾ
8 ಡನ ಮಗ ಜಕ್ಕಗೌಡ
9 ನು ಮಲ್ಲೇದೇವರ ನಿ
10 ವೇದ್ಯ ಬಿಟ್ಟಭೂಮಿ
11 ಕೆಱೆಯಕೆಳಗೆ ಕಂ ೧೦
12 ಇದನು ಸಲಿಸದವನು
13 ಪಂಚಮಹಾಪಾತಕನಕ್ಕು
14 ಸೇನದೋವಮಾದಯ್ಯನ್ಕಬರಹ

## 163

ತಾಳಗುಂದಹೋಬಳಿ ತಾಳಗುಂದ ಕನಬೆಯಲ್ಲಿ ಗಂಗಾಧರದೇವಾಲಯದ ಮುಂದೆ ಇರುವಕಲ್ಲು.

ಪ್ರಮಾಣ 3′—6″×2′—3″

1 ಸ್ವಸ್ತಿ ಶ್ರೀಮಚ್ಚಾಳುಕ್ಯ ಚಕ್ರವರ್ತ್ತಿ ಸೋಮೇಶ್ವರ ದೇವವರಿಷ ೮
2 ನೆಯ ಪ್ಲವಂಗ ಸಂವತ್ಸರದ ಕಾರ್ತ್ತಿಕ ಬ ೧೩ ಸುಕ್ರವಾರದಲು
3 ಶ್ರೀಮತು ತಾಳಗುಂದದ ಮೂವತ್ತಿರ್ಚ್ಛಾಸಿರದ
4 ...... ...............................
5 ಮಗಂ ಗೋವರ ಗೂಳಜನಮಗ ಸೋಮಯನು ಅ····
6 ವಾಸುರಬವರದಲು ಕಾದಿಸುರಿಗಿಱಿದು ಸು
7 ರರೋಕ ಪ್ರಾಪ್ತನಾದ ॥

## 164

ಅದೇ ತಾಣಗುಂದದ ಹೋಬಳಿ ಶಿವಳ್ಳಿಗ್ರಾಮದ ಹನುಮಂತದೇವರ ದೇವಾಲಯದಮುಂದೆ ನೆಟ್ಟಕಲ್ಲು.

ಪ್ರಮಾಣ 4′—3″×2′—9″

1 ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀ ಪ್ರಿಥಿವೀವಲ್ಲಭ ಮಹಾ ·························
2 ···························ಕುಳತಿಳಕ ಚಾಳುಕ್ಯ ಚಕ್ರವರ್ತ್ತಿ ಸೋಮೇಶ್ವರ
3 ···························ಮಲೆಯನಾಯಕ····················
4 ···························ತುಱುವಹುಯಲಲು·············ಸುರ
ಲೋಕ·························ನವಿಲೆಯನಾಯಕ····················

## 165

ಅದೇ ತಾಣಗುಂದದಹೋಬಳಿ ಮಳೂರುಗ್ರಾಮದಬಳಿ ಶಾನುಭೋಗ ಮಧ್ವರಾಯರ ಗದ್ದೆಯಲ್ಲಿ ನೆಟ್ಟಕಲ್ಲು.

ಪ್ರಮಾಣ 3′—0″×1′—6″

1 ಯುವಸಂವತ್ಸರದ··············
2 ಶುಧ ಪಾಡಿವ ಆದಿವಾರ ··········
3 ಲು ಮೆದೆಯಜೀಯ ·············
4 ಮಜೀಯಗಳಿಗೆ ಬೊಂಮು
5 ಗೌಂಡ ಜಕ್ಕಗೆಉಂಡಗ್ಗ
6 ಉ ಆನೆಯಕೆಱೆಯಕೆ
7 ಳಗೆ ತಂಪ್ಮು ಉಂಬಳಿಯೊಳ
8 ಗೆ ತೋಟಕೆಸಲುವಾಗಿ ಕಂಬ
9 ವೇಳಂಕೊಟ್ಟು ಆ ತಂಮಡಿಯರ
10 ಕಯುಲುಸಂಧವಟ್ಟದ ಕೆಳ
11 ಗೆ ಪೊದಲೇರಿಯಲು ಕಂಬವೇ
12 ಉ ಕೊಂಡು ಮಹಾಜನಂಗ
13 ಳ ಸಾಕ್ಷಿ ಸಾಯಂಣ ಸೋವಂಣ
14 ವೀರಂಣ ಜಕ್ಕಂಣ
15 ಮಂಗಳ ಮಹಾ ಶ್ರೀ ಶ್ರೀ ? ಶ್ರೀ

## 166

### ಅದೇಹೋಬಳಿ ದೇವಿಕೊಪ್ಪದ ಕಾನಿನಲ್ಲಿ ಪಟೇಲ ಮಲ್ಲಪಗೌಡ ಜಮಾನಿನಲ್ಲಿ ಇರುವಕಲ್ಲು.

ಪ್ರಮಾಣ 3′—6″×2′—6″

1 ಸ್ವಸ್ತಿಶ್ರೀ ಪೃಥಿವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ
2 ಸತ್ಯಾಶ್ರಯ ಕುಳತಿಳಕ ಚಾಳುಕ್ಯಾಭರಣ ಶ್ರೀಮತ್ತ್ರಿಭುವನ ಮಲ್ಲ
3 ರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂ.........
4 ಸ್ವಸ್ತಿ ಸಮಸ್ತ ವಸ್ತುಗುಣಸಂಪನ್ನರು ನುಡಿದಂತೆ.........
5 ..................ತೊಡರೆಬಲ್ಲುಂ ..........ಗಣ್ಡರತಳ .........
6 ಶ್ರೀಮತ್ತ್ರಿಭುವನ ಮಲ್ಲದೇವಪಾದಾರಾಧಕಂ.........
7 ..................ಮನೆಯ ನಾಯಕರ್ಪರಿಕಾಚಿ.........
8 .................. ಸರ್ವನ್ಯತಮ್ಮಂ ಕೀರ್ತ್ತಿನಾರಾಯಣಂ .........
9 ..................ಶ್ರೀಮಚ್ಚಾಳುಕ್ಯ ವಿಕ್ರಮಕಾಲದ ೧೧ನೆಯ ಶ್ರೀ.........
10 ..................ಸುಖಸಂಕಥಾ.........
11 .................. ವಾರದಂದು ಶ್ರೀ .........
12 ..................ಶಿಶ್ಯವಾಮಶಕ್ತಿ
13 ..................ಹೇಶ್ವರ..........ಸನ್ನಿಧಾನದಲು.........
14 ..................ಇನ್ತೀಧರ್ಮ್ಮಮಂ ಪ್ರತಿಪಾಳಿಸಿದಂ ವಾರಣಾಸಿ
15 ಕ್ಷೇತ್ರ ..........ಸಾಸಿವ್ವರ್ಬ್ರಾಹ್ಮಣಗ್ರ್ಗೆ
16 ಕೊಟ್ಟಫಲ..........ಸಾಸಿರಕವಿಲೆಯ
17 ಸಾಸಿವ್ವರ್ಬ್ರಾಹ್ಮಣರುಮನಳಿದಪಾತಕನಕ್ಕು ಸ್ವದತ್ತಾಂ ಪರದತ್ತಾಂ ವಾಯೋ ಹ
18 ರೇತವಸುಂಧರಾಂ ಶಷ್ಟಿರ್ವರ್ಷ ಸಹಸ್ರಾಣಿವಿಷ್ಠಾಯಾಂ ಜಾಯತೇ ಕ್ರಿಮಿಃ

## 167

### ಅದೇ ತಾಣಗುಂದಹೋಬಳಿ (ಬೇಚರಾಕ್) ಕಾಡತನಹಳ್ಳಿಯ ಬಳಿ ಆಂಜನೇಯ ದೇವಾಲಯದ ಬಳಿ ನಟ್ಟಕಲ್ಲು.

ಪ್ರಮಾಣ 4′—3″×2′—3″

1 ಸ್ವಸ್ತಿಶ್ರೀ ಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಸ್ವರ ಪರ
2 ಮ ಭಟ್ಟಾರಕ ಸತ್ಯಾಶ್ರಯ ಕುಳತಿಳಕ ಚಾಳುಕ್ಯಾಭರಣ ಶ್ರೀಮ
3 ತ್ರಿಭುವನ ಮಲ್ಲದೇವರ ವಿಜಯರಾಜ್ಯ ಮುತ್ತರೋತ್ತರಾಭಿವೃದ್ಧಿ ಪ್ರವರ್ದ್ಧಮಾ
4 ನಮಾಚಂದ್ರಾರ್ಕ ತಾರಂಬರಂ ಸಲುತ್ತುಮಿರೆ ಸ್ವಸ್ತಿ ಸಮಸ್ತ ಶೀಲಗುಣ
5 ಸಂಪನ್ನನುಡಿದು ಮತ್ತೆನ್ನ ಹರಚರಣಸರೋರುಹ ಭೃಂಗಸಾಹಸೋತ್ತುಂ
6 ಗ ತೊಡರೆ ಬಲ್ಗಂಡಗಂಡರಗಂಡ ವೈರಿಭೇರುಂಡ ಮದಗಜಸಾಧಕನಪ್ಪ
7 ಶ್ರೀಮನ್ಮಹಾ ಆನೆವಟ್ಟಿಯನಾಯಕಗ್ರ್ಗಂಮಾದಳಗವುಡನಾಯಕಿತಿಗಂ
8 ಪುಟ್ಟಿದ ಬೀರಮನಾಯಕರು ಅವರ ತಮ್ಮ ಮಲ್ಲ.........
9 ..................ಆಳುತ್ತಿದ್ದ್ರ ಸ್ವಸ್ತಿ ಶ್ರೀಮಚ್ಚಾಳುಕ್ಯ ವಿಕ್ರಮಕಾಲದ
10 ..................೧೧ನೆಯ ಶ್ರೀಮುಖ ಸಂವತ್ಸರದ ಪುಸ್ಯ ಸು ೧೧ ಮಾಳವೂ
11 ರಲು ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತುಮಿದ್ದ್ರಂದಿನುತ್ತರಾಯಣಸಂಕ್ರಾನ್ತಿ
12 ವ್ಯತೀಪಾತವಾದಿತ್ಯವಾರದಂದು ಶ್ರೀಮತು ಚಂದ್ರೇಸ್ವರದೇವರ ನಿತ್ಯಪೂಜೆ ನಂದಾದೀವಿಗೆಗಂ
13 ದು ಕಚ್ಚವಿಯಗಳೆಯಲುಮತ್ತಲು.......... ........ತಂಮಡಿಗಳಮನೆಯ ನಿವೇಶನ
14 ಕ್ಕೆ ಗಳೆಯಲು ೭೪೦ ಕೊಟ್ಟು.........
15 ..................ಇಂತೀಧಮ್ಮರ್ಮಮಂ ಪ್ರತಿಪಾಳಿಸಿದವನಾವವನು
16 ವಾರಣಾಸಿ ಕುರುಕ್ಷೇತ್ರ..................ಕವಿಲೆಯಂ..................ಕೊಟ್ಟಫ
17 ಲಮಕ್ಕು ಇ ಧಮ್ಮರ್ಮಮನಳಿದಾತನಾಪುಂಣ್ಯತೀರ್ತ್ಥದಲು ಸಾಯಿರಕವಿಲೆಯು
18 ಮನಾಸಾಯಿರ ಬ್ರಾಹ್ಮಣರುಮನಳಿದ ಪಾತಕನಕ್ಕು ಸ್ವದತ್ತಂ ಪರದತ್ತಂ
19 ವಾಯೋಹರೇತ ವಸುಂಧರಾಂ ಶಷ್ಟಿವರಿಷಸಹಸ್ರಾಣಿ ವಿಷ್ಟಾಯಾಂ
20 ಜಾಯತೇ ಕ್ರಿಮಿಃ

## 168

### ಅದೇ ತಾಣಗುಂದಹೋಬಳಿ ಹೊಸಹಳ್ಳಿಗೆಸೇರಿದ ಗುಡ್ಡದಕೆಳಗೆ ಫಾರೆಸ್ಟಿನಲ್ಲಿ ಪಾಳುದೇವಾಲಯದಬಳಿ ಬಿದ್ದಿರುವ ಕಲ್ಲು.

1 ಆನಂದಸಂವತ್ಸರದ ಆಶಾಢ ಬ ೮ ಲು
2 ದೇವಗೌಂಡನಮಗ ಬೀರಣ ಮಲಪಗವುಂಡನ ಮೇಗೆ

3 ಬಂದು ಹುಯಲ..................ತುಱುವ ಮಗುಳ್ಚಿ ಸುರ
4 ರೋಕಪ್ರಾಪ್ತನಾದ ॥ ಮಂಗಳಮಹಾ ಶ್ರೀ ಶ್ರೀ ಶ್ರೀ

## 169

ಅದೇಹೋಬಳಿ ಗುಡ್ಡರ ಹೊಸಹಳ್ಳಿಗೆಸೇರಿದ ಫಾರೆಸ್ಟಿನಲ್ಲಿ ಗುಡ್ಡದಬುಡದಲ್ಲಿ ನಟ್ಟಕಲ್ಲು.

1 ಸ್ವಸ್ತಿ ಶ್ರೀಮತು ವೀರಬಲ್ಲಾಳದೇವವರಿಷ
2 ದ ಕ್ರೋಧನ ಸಂವತ್ಸರದ ಚೈತ್ರ ಸು ೧೦ ಬ್ರಿಹವಾರ
3 ದಂದು ಶ್ರೀಮತು ಬೀರರಸನಮಗ ಮಾದರಸನು
4 ಮರಡಿಯ ಹುಯಲಲಿ ಕಾದಿ ಪಲರನಿಱಿದು
5 ಸುರರೋಕಪ್ರಾಪಿತನಾದ ॥ ಜಿತೇನಲಭ್ಯತೇ
6 ಲಕ್ಷುಮೀ ಮೃತೇನಾಪಿ ಸುರಾಂಗನಾ ಕ್ಷಣವಿಧ್ವಂ
7 ಸನೇಕಾಯೇಕಾಚಿನ್ತಾ ಮರಣೇರಣೇ ಮಂಗಳಮಹಾ ಶ್ರೀ ॥......

---

## 170

### ಸೊರಬ ತಾಲ್ಲೋಕು.

ಕ್ಯಾಸನೂರುಹೋಬಳಿ ಚೆಟ್ಟೂರುಗ್ರಾಮದ ಊರುಬಾಗಿಲಬಳಿ ಅರಳಿಮರದ ಬುಡದಲ್ಲಿ ನಟ್ಟಕಲ್ಲು.

ಪ್ರಮಾಣ 3′—3″×2′—9″

1 ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ ತ್ರೈರೋಕ್ಯ ನ
2 ಗರಾರಂಭ ಮೂಲಸ್ತಂಭಾಯ ಶಂಭವೇ । ಸ್ವಸ್ತಿಶ್ರೀ ವಿಜಯಾಭ್ಯು
3 ದಯ ಶಾಲಿವಾಹನ ಶಕವರುಷ ೧೫೮೩ನೆಯ ಪ್ಲವ
4 ಸಂವತ್ಸರದ ಮಾರ್ಗಶಿರ ಶು ೫ ಲು ಶ್ರೀಮತು ಸಜ್ಜನ ಶುದ್ಧ ಶಿವಾಚಾರ ಸಂ
5 ಪನ್ನರಾದ ಹುರುಳಿಯ ಚೆಂನಮಲ್ಲೇದೇವರಿಗೆ ಎಡವಮುರಾ
6 ರಿ ಕೋಟಿಕೋಳಾಹಳ ವಿಶುದ್ಧ ವೈದಿಕಾದ್ವೈತ ಪ್ರತಿಷ್ಠಾ
7 ಪಕ ಶಿವಗುರುಭಕ್ತಿಪರಾಯಣರಾದ ಕೆಳದಿ ಸದಾಶಿವ ನಾ
8 ಯಕರ ವಂಶೋದ್ಭವರಾದ ಸಿದ್ಧಪನಾಯಕರ ಪೌತ್ರರು ಶಿವಪ್ಪ
9 ನಾಯಕರ ಪುತ್ರರಾದ ಸೋಮಶೇಖರನಾಯಕರ ಧರ್ಮಪ
10 ತ್ನಿಯರಾದ ಚೆಂನಂಮಾಜಿಯವರು ಬರಸಿಕೊಟ್ಟ ದಾನ
11 ಶಾಸನ ಕ್ರಮವೆಂತೆಂದರೆ...............ಪುಡಗಣಿಸೀಮೆಯೊಳಗಣ
12 ...............ಗ್ರಾಮವನು ಶಿವಾರ್ಪಿ
13 ತವಾಗಿ ಬಿಟ್ಟೆವಾಗಿ ಈ ಗ್ರಾಮಕ್ಕೆ ನಟ್ಟ ಲಿಂಗಮುದ್ರೆ ಕಲ್ಲಿನ ವಳ
14 ಗುಳ್ಳ ನಿಧಿ ಮೊದಲಾದ ಅಷ್ಟಭೋಗತೇಜಸ್ವಾಮ್ಯವನು
15 ಪೂರ್ವಮರಿಯಾದೆಯಲ್ಲಿ ಆಗುಮಾಡಿಕೊಂಡು..........................
16 ......................ಕೊಟ್ಟ ಶಾಸನ..........................
17 ಸ್ವದತ್ತಾದ್ವಿಗುಣಂ ಪುಣ್ಯಂ ಪರದತ್ತಾನುಪಾಲನಂ ಪರದ
18 ತ್ತಾಪಹಾರೇಣ ಸ್ವದತ್ತಂ ನಿಷ್ಫಲಂಭವೇತ್ ॥..........................

## 171

ಅದೇ ಚೆಟ್ಟೂರುಗ್ರಾಮದ ಊರಮುಂದೆ ಪ್ರಾಣದೇವರ ಗುಡಿಯಬಳಿ ಅಶ್ವತ್ಥಮರದಬುಡದಲ್ಲಿ ನಟ್ಟಕಲ್ಲು.

ಪ್ರಮಾಣ 3′—0″×2′—2″

1 ಶ್ರೀಗಣಾಧಿಪತಯೇನಮಃ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮ
2 ರಚಾರವೇ ತ್ರೈರೋಕ್ಯನಗರಾರಂಭ ಮೂಲಸ್ತಂಭಾಯಶಂಭವೇ ॥
3 ಸ್ವಸ್ತಿ ಸಕ ವರಿಷ ೧೧೧೨ನೆಯ ವಿಕಾರಿಸಂವತ್ಸರದ ಭಾದ್ರಪದ
4 ...................ಮಲ್ಲಯನಮೇಲೆ ಧಾಳಿ...................ಸಾಗದ್ದೆಯ ಹುಳ್ಳಗವುಂಡ
5 ನಿಱಿದು ಸುರಗಣಿಕೆಯರೊಳ್ಕೂಡಿದಂ ಜಿತೇನ
6 ಲಭ್ಯತೇ ಲಕ್ಷುಮಿ ಮಿತ್ರೇನಾಪಿ ಸುರಾಂಗನಾ । ಕ್ಷಣವಿಧ್ವಂಸ
7 ನೇಕಾಯೇಕಾಚಿನ್ತಾ ಮರಣೇ ರಣೇ ಮಂಗಳಮಹಾ ಶ್ರೀ

---

